# ಪಾತಾಳದಲ್ಲಿ ಪಾಪಚ್ಚಿ

ನಾ. ಕಸ್ತೂರಿ, ಎಂ.ಎ., ಬಿ.ಎಲ್.

ಚಿತ್ರಕಾರರು
ಎಂ. ವಿ. ಸೀತಾರಾಮಯ್ಯ, ಎಂ.ಎ.




ಬೆಲೆ: ಒಂದು ರೂಪಾಯಿ

# ಅರಿಕೆ

ಆಂಗ್ಲ ಭಾಷೆ ಪ್ರಚಾರದಲ್ಲಿರುವ ಪ್ರತಿಯೊಂದು ದೇಶದಲ್ಲಿಯೂ ಜನರಿಗೆ ಅಚ್ಚುಮೆಚ್ಚಾಗಿರುವ "Alice's Adventures in Wonderland" ಎಂಬ ಗ್ರಂಥದ ಆಧಾರದ ಮೇಲೆ ಈ ಪುಸ್ತಕವನ್ನು ಬರೆದಿದ್ದೇನೆ. ಅಕ್ಷರಶಃ ಭಾಷಾಂತರವಾಡಿದ್ದಲ್ಲಿ ಪಾಶ್ಚಾತ್ಯ ಸಂಸ್ಕೃತಿಗೆ ಮಾತ್ರ ಹೊಂದುವ ಅನೇಕ ಸನ್ನಿವೇಶಗಳನ್ನೂ ಆಂಗ್ಲ ಸಾಹಿತ್ಯವನ್ನರಿತವರಿಗೆ ಮಾತ್ರ ರುಚಿಸಬಹುದಾದ ಕೆಲವು ಹಾಸ್ಯಗಳನ್ನೂ ತಿಳಿದುಕೊಳ್ಳಲು ವಾಚಕರಿಗೆ ತೊಂದರೆಯಾಗಬಹುದಾದ್ದರಿಂದ, ಸೂಕ್ತತೋರಿದಂತೆ, ಅಲ್ಲಲ್ಲಿ ಬದಲಾವಣೆಗಳನ್ನು ಮಾಡಿದ್ದೇನೆ, ಕಥೆಯನ್ನು ಕೊಂಚ ಮಾರ್ಪಡಿಸಿದ್ದೇನೆ. ಈ ನನ್ನ ಸ್ವತಂತ್ರವರ್ತನೆಯಿಂದ ಮೂಲದ ಸ್ವಾರಸ್ಯಕ್ಕೆ ಹೆಚ್ಚು ಕುಂದು ಬಂದಿಲ್ಲವೆಂದು ನನ್ನ ಭಾವನೆ.

ಇಂಗ್ಲೀಷಿನಲ್ಲಿ ಈ ಕಥೆಯನ್ನು ಬರೆದವರು ಆಕ್ಸ್‌ಫರ್ಡ್ ವಿಶ್ವವಿದ್ಯಾ ನಿಲಯದಲ್ಲಿ ೧೮೫೫ ರಿಂದ ೧೮೮೧ರ ವರೆಗೆ ಗಣಿತಶಾಸ್ತ್ರ ಬೋಧಕರಾಗಿದ್ದು ತಮ್ಮ ಸಂಶೋಧನಾಸಾಮರ್ಥ್ಯದಿಂದ ಆ ಶಾಸ್ತ್ರವನ್ನು ಬಹುಮಟ್ಟಿಗೆ ಮುಂದುವರಿಸಿದ ಚಾರಲ್ಸ್ ಲುಟ್ವಿಗ್ ಡಾಡ್ಜ್‌ಸನ್ ಎಂಬವರು. ಗಣಿತ ಶಾಸ್ತ್ರಕ್ಕೂ ಮಕ್ಕಳ ಮನಸ್ಸನ್ನು ಸೆಳೆಯಬಲ್ಲ ಸಾಹಿತ್ಯಕ್ಕೂ ಉತ್ತರ ದಕ್ಷಿಣ ಧ್ರುವಗಳಿಗಿರುವಷ್ಟು ಅಂತರ ಎಂದು ಹೇಳಬಹುದು. ಆದರೆ, ಡಾಡ್ಜ್‌ಸನ್ನರಲ್ಲಿ ಅವು ಎರಡೂ ಕೂಡಿತ್ತು. ಅವರು ಕೇವಲ ಶುಷ್ಕ ಪಂಡಿತರಾಗಿರಲಿಲ್ಲ; ನಗು ನಗುತ್ತಲೇ ಅನಾಯಾಸವಾಗಿ ಅವರ ವಿದ್ಯಾರ್ಥಿ ಗಳು ಕಠಿನವಾದ ವಿಷಯಗಳನ್ನೂ ಕೂಡ ಕಲಿಯುತ್ತಿದ್ದರಂತೆ. ಚಿಕ್ಕ ಪಾಠಶಾಲೆಯಲ್ಲಿ ವ್ಯಾಸಂಗಮಾಡುತ್ತಿದ್ದಾಗಲೇ ಡಾಡ್ಜ್‌ಸನ್ ಅವರು ಸ್ನೇಹಿತರ ಮೇಲೂ ಸಹಪಾಠಿಗಳ ಮೇಲೂ ತುಂಟಪದ್ಯಗಳನ್ನು ಬರೆದು, ಹಾಸ್ಯಪೂರ್ಣವಾದ ಕಥೆಗಳನ್ನು ಕಟ್ಟಿ ಗೇಲಿ ಎಬ್ಬಿಸುತ್ತಿದ್ದರಂತೆ. ಕಾಲೇಜಿಗೆ ಬಂದು ಸೇರಿದಾಗಲಂತೂ ಅವರ ಹಾಸ್ಯಕ್ಕೂ ಭಾವನಾ ಶಕ್ತಿಗೂ ಒಂದು ಹೊಸ ಹುರುಪು ಬಂದಂತಾಯಿತು. ಅನೇಕ ಸಂವತ್ಸರ ಗಳ ಅಧ್ಯಾಪಕ ವೃತ್ತಿಯೂ ಕೂಡ ಅವರ ಉತ್ಸಾಹವನ್ನು ತಗ್ಗಿಸಲಿಲ್ಲ. ಆದರೆ, ಮೇಲು ಮೇಲೆ ಗಂಭೀರ ಸ್ವಭಾವದವರಾಗಿ ಕಂಡುಬಂದ

ಡಾಡ್ಜ್‌ಸನ್ ಅವರನ್ನು ಯಾರೂ ಕಥೆ ಪುಸ್ತಕಗಳ ಬರಹಗಾರರೆಂದು ಹೇಳುವುದಕ್ಕಾಗುತ್ತಿರಲಿಲ್ಲ. "ಓದ್ಸೋ ಐಗಳ್ಕಟ್ಕೋಂತಾರ ಸೂಳೆ ಕಾಲಿನ್ಗೊಲ್ಸ?" ಎಂದು ರತ್ನನಹಾಗೆ ಎಲ್ಲರೂ ಕೇಳಿದರು. ವಾಚಕರನ್ನು ಮತ್ತಷ್ಟು ಮರುಳುಮಾಡುವುದಕ್ಕಾಗಿ ಡಾಡ್ಜ್‌ಸನ್ ಅವರು ಇನ್ನೊಂದು ಉಪಾಯ ಹೂಡಿದರು. ಗಣಿತಶಾಸ್ತ್ರ ಸಂಶೋಧನೆ, ಲಘುಸಾಹಿತ್ಯ ರಚನೆ ಎಂಬ ಎರಡು ಕೆಲಸಗಳಿಗಾಗಿ ಅವರು ತಮ್ಮನ್ನೇ ಎರಡು ಬೇರೆ ಬೇರೆಯಾದ ವ್ಯಕ್ತಿಗಳನ್ನಾಗಿ ಮಾಡಿಕೊಂಡರು. ಅಂದರೆ, ಗಣಿತ ಗ್ರಂಥ ಗಳನ್ನು ಬರೆದದ್ದು ಪ್ರೊಫೆಸರ್ ಡಾಡ್ಜ್‌ಸನ್ ಎಂಬವರು; ಇತರ ಗ್ರಂಥ ಗಳನ್ನು ಬರೆದದ್ದು ಲೂಯಿ ಕರೋಲ್ ಎಂಬ ಇನ್ನೊಬ್ಬರು—ಹೀಗೆ! ತನಗೂ ಲೂಯಿ ಕರೋಲ್ ಎಂಬವನಿಗೂ ಯಾವ ವಿಧವಾದ ಸಂಬಂಧವೂ ಇಲ್ಲವೆಂದು ಡಾಡ್ಜ್‌ಸನ್ ಅವರು ಸದಾ ಹೇಳುತ್ತಿದ್ದರು. ಕೊನೆಯುತನಕ ಅದೇ ಹಠವನ್ನೇ ಸಾಧಿಸಿದರು. "Alice's Adventures in Wonderland" ಎಂಬ ಗ್ರಂಥವನ್ನು ೧೮೬೫ರಲ್ಲಿ ಲೂಯಿ ಕರೋಲರು ಪ್ರಕಟಿಸಿದರು. ಕೂಡಲೇ, ಅದು ಎಲ್ಲಾ ವಯಸ್ಸಿನ ಮಕ್ಕಳನ್ನೂ ಆಹ್ಲಾದ ಪಡಿಸಿದ್ದರಿಂದ, ಎಲ್ಲರೂ ಕರೋಲರನ್ನು ಕೊಂಡಾಡಿದರು. ಅದರ ಹಿಂದೆಯೇ ಪ್ರಕಟಿತವಾದ ಇನ್ನೂ ಅನೇಕ ಗ್ರಂಥಗಳು ಡಾಡ್ಜ್‌ಸನ್ ಅವರ ಕೀರ್ತಿ ಯನ್ನು ನಾನಾ ದೇಶಗಳಲ್ಲಿ ಹಬ್ಬಿಸಿದುವು. ಆದರೂ, ಕರೋಲ್ ಅವರು ಜನರ ಮುಂದೆ ಬಂದು ತಮ್ಮ ನಿಜಸ್ವರೂಪವನ್ನು ಬಹಿರಂಗಪಡಿಸಲಿಲ್ಲ. ಡಾಡ್ಜ್‌ಸನ್ ಅವರು ಲೂಯಿ ಕರೋಲ್ ಎಂಬವನು ತಾನಲ್ಲ ಎಂದೇ ವಾದಿಸುತ್ತಾ ಬಂದರು!

ಪಾಪಚ್ಚಿಯ ಮೂಲವ್ಯಕ್ತಿಯಾದ "ಆಲಿಸ್ಸ"ಳ ಕಥೆಯನ್ನು ಇಂದು ಓದಿ ಆನಂದಿಸದಿರುವವರು ಅಪರೂಪ. ಪಾಶ್ಚಾತ್ಯ ದೇಶಗಳಲ್ಲಿ ಪ್ರತಿಯೊಂದು ಮಗುವಿಗೂ ಅವಳ ಪರಿಚಯವು ಚೆನ್ನಾಗಿ ಉಂಟು. ಕೇವಲ ಮಕ್ಕಳಿಗೆ ಮಾತ್ರವೇ ಅಲ್ಲ, ಎಲ್ಲಾ ವಯಸ್ಸಿನವರಿಗೂ ಅವಳು ಅಚ್ಚುಮೆಚ್ಚಾಗಿ ಪರಿಣಮಿಸಿದ್ದಾಳೆ. ಏಕೆಂದರೆ, ನಾವೆಲ್ಲರೂ ಅವಳಂತೆಯೇ, ಹೆಚ್ಚುಕಡಮೆ, ಸ್ವಪ್ನಜೀವಿಗಳು. ಅದೂ ಅಲ್ಲದೆ, ಪ್ರಕೃತಿಯ ನಿಯಮಗಳೆಂಬ ವಜ್ರಶೃಂಖಲೆ ಗೊಳಗಾಗಿರುವ ನಮಗೆಲ್ಲರಿಗೂ ಕೆಲವು ವೇಳೆ ಬಿಡುಗಡೆಯ ಹಂಬಲು

ಬಾಧಿಸುತ್ತದೆ. "ಒಂದು ಕ್ಷಣವಾದರೂ ವೈಪಿಧ್ಯಕಾದರೂ ಬಿಸಿಲಿದ್ದು ಮರವಿದ್ದು ನೆಳಲಿರದೆ ಹೋಗದೇ?....ಒಂದು ದಿನ ನೀರು ಸುಡ ಬಾರದೇ? ಒಂದುಸಲವಾದರೂ ಕಲ್ಲು ಹಕ್ಕಿಯ ತೆರದಿ ಹಾರಾಡಬಾರದೇ? ಒಂದು ಕ್ಷಣವಾದರೂ ದಾಸ್ಯಸಿಯಮಗಳಳಿದು ಸ್ವಾತಂತ್ರ್ಯ, ಸ್ವಾಚ್ಛಂದ್ಯ, ಹುಚ್ಚಾಟವಾಗದೇ?" ಎಂದು ಪುಟ್ಟಪ್ಪನವರಿಗೆ ಅನ್ನಿಸಿದ ಹಾಗೆ ನಮಗೂ ಆಗಾಗ ಅನ್ನಿಸುತ್ತದೆ. ಆದ್ದರಿಂದಲೇ ಈ ವೈಜ್ಞಾನಿಕ ಯುಗದಲ್ಲಿಯೂ ಕೂಡ ಇಂಥಾ ಕಥೆಗಳನ್ನೋದಿ ಆನಂದಪಡುವವರ ಸಂಖ್ಯೆ ಹೆಚ್ಚುತ್ತಲೇ ಇರುವುದು....

ಸ್ವಭಾವತಃ ಸೋಮಾರಿಯಾದ ನನ್ನನ್ನು ಈ ಪುಸ್ತಕ ಬರೆಯಲು ಪದೇ ಪದೇ ತಿವಿದು ಎಚ್ಚರಿಸಿದ ನನ್ನ ಮಿತ್ರರಾದ ಶ್ರೀಮಾನ್ ಪುಟ್ಟಪ್ಪನವರಿಗೂ, ಬರೆದದ್ದನ್ನು ಓದಿನೋಡಿ ಅದಕ್ಕೆ ನಾಲ್ಕು ಜನರ ಮುಂದಿಡುವಷ್ಟು ಯೋಗ್ಯತೆಯನ್ನು ಕೊಡಲು ಸಹಾಯಮಾಡಿದ ನನ್ನ ಹಿತಚಿಂತಕರಾದ ಶ್ರೀಮಾನ್ ತೀ. ನಂ. ಶ್ರೀಕಂಠಯ್ಯನವರಿಗೂ, ಶ್ರೀಮಾನ್ ಡಿ. ಎಲ್. ನರಸಿಂಹಾಚಾರ್ಯರಿಗೂ ವಂದನೆಗಳನ್ನರ್ಪಿಸುತ್ತೇನೆ. ಈ ಪುಸ್ತಕಕ್ಕೆ ಬೇಕಾದ ಚಿತ್ರಗಳನ್ನು ಅಂದವಾಗಿ ಬರೆದುಕೊಟ್ಟು ನನ್ನ ಒಣಮಾತುಗಳಿಗೆ ಸವಿಸೇರಿಸಿದ ಶ್ರೀಮಾನ್ ಎಂ. ವಿ. ಸೀತಾರಾಮಯ್ಯನವರಿಗೆ ನಾನು ಚಿರ ಋಣಿಯಾಗಿದ್ದೇನೆ. ಕನ್ನಡ ಭಾಷೆಯನ್ನು ನನಗೆ ಕಲಿಸಿದವರು ಪುಟ್ಟಪ್ಪ ನವರಂಥಾ ಸ್ನೇಹಿತರು, ಮತ್ತು, ಸೀತಾರಾಮಯ್ಯನವರಂಥಾ ನನ್ನ ಆಪ್ತ ವಿದ್ಯಾರ್ಥಿಗಳು. ಆದ್ದರಿಂದ, ಈ ನನ್ನ ಮೊದಲನೆಯ ಕನ್ನಡ ಗ್ರಂಥವು ಪ್ರಕಟವಾಗುವ ಅವಸರದಲ್ಲಿ ನಾನು ಅವರನ್ನು ಬಹಳ ಕೃತಜ್ಞತೆ ಯಿಂದ ಸ್ಮರಿಸುತ್ತೇನೆ. ಎಲ್ಲದಕ್ಕಿಂತ ಮೇಲಾಗಿ ಈ ಪುಸ್ತಕವನ್ನು ಅಚ್ಚುಹಾಕಿಸಿ, ಕನ್ನಡಿಗರ ಕೈಯಲ್ಲಿಡುವ ಸಾಹಸವನ್ನು ವಹಿಸಿರುವ ಶಿವಮೊಗ್ಗೆ ಕರ್ಣಾಟಕ ಸಂಘದ ಅಧಿಕಾರಿಗಳಿಗೆ ನಾನು ತುಂಬಾ ಕೃತಜ್ಞನಾಗಿರುತ್ತೇನೆ.

'ಕಲ್ಪತರು,' ಕೃಷ್ಣಮೂರ್ತಿಪುರಂ,
ಮೈಸೂರು,
೫-೧೦-೧೯೩೪.

ನಾ. ಕಸ್ತೂರಿ.

# ವಿವರ

---

# ಚಿತ್ರಗಳ ವಿವರ

# ಪಾತಾಳದಲ್ಲಿ ಪಾಪಚ್ಚಿ

## ಮೊಲದ ಬಿಲ

ಪಾಪ! ಪಾಪಚ್ಚಿ ಅಕ್ಕನ ಹತ್ತಿರ ಹುಲ್ಲಿನ ಮೇಲೆ ಎಷ್ಟು ಹೊತ್ತು ಸುಮ್ಮನೆ ಕುಳಿತಿದ್ದಾಳು! ಒಂದೆರಡುಸಲ ಬಹಳ ಬೇಸರವಾದಾಗ ಅಕ್ಕನ ಕೈಯಲ್ಲಿದ್ದ ಪುಸ್ತಕವನ್ನು ಕತ್ತೆತ್ತಿ ನೋಡಿದಳು. ಆದರೆ, ಅದರಲ್ಲಿ ಚಿತ್ರಗಳೇ ಇರಲಿಲ್ಲ. "ಥೂ! ಚಿತ್ರಗಳಿಲ್ಲದೆ ಪುಸ್ತಕಗಳನ್ನೇಕೆ ಅಚ್ಚುಹಾಕುತ್ತಾರೆಯೋ?" ಎಂದು ಗೊಣಗಿಕೊಂಡಳು.

ಆ ದಿನ ಬಿಸಿಲು ಬಲವಾಗಿತ್ತು. ಪಾಪಚ್ಚಿಗೆ ಕೊಂಚಕೊಂಚವಾಗಿ ನಿದ್ದೆಹತ್ತುತ್ತಾಬಂದಿತು....ಪಕ್ಕದ ಮನೆಯಿಂದ ಸೀಬೆಕಾಯಿ ಕಿತ್ತುಕೊಡು ಎಂದು ಶಾಮುವನ್ನು ಕೇಳೋಣವೆನಿಸಿತು...."ಬೇಡ. ಈಗ ಯಾರು ಮನೆಯೊಳಕ್ಕೆ ಹೋಗುವವರು? ಶಾಮು ಪಕ್ಕದ ಮನೆಗೆ ಬರುತ್ತಾನೆಯೋ, ಇಲ್ಲವೋ? ಜಗಳಕ್ಕೆ ಎಲ್ಲರ ಎದುರಿಗೂ ಅವನ ಸಂಗ ಬಿಟ್ಟಮೇಲೆ ಈಗ ಹೇಗೆ ಅವನನ್ನು ಮಾತನಾಡಿಸುವುದು?" ಎಂದು ಯೋಚಿಸುತ್ತಾ ಅಲ್ಲಿಯೇ ಮಲಗಿಕೊಂಡಳು.

....ಆಗ....ಕೆಂಪುಕಣ್ಣಿನ, ಮೋಟುಬಾಲದ, ಉದ್ದ ಕಿವಿಗಳ, ಬಿಳಿಯ ಮೊಲವೊಂದು ಅವಳ ಹತ್ತಿರವೇ ಓಡಿತು. ಅದರ ಓಟದ ರಭಸದಿಂದೆದ್ದ ಗಾಳಿಯು ಪಾಪಚ್ಚಿಗೆ ಸೋಕಿತು. ಮೊಲವು, "ಅಯ್ಯೋ! ದೇವರೇ! ಹೊತ್ತಾಗಿಹೋಯಿತಲ್ಲಾ!" ಎಂದು ಹೇಳಿಕೊಂಡೇ ಓಡುತ್ತಿತ್ತು. ಅದು ಹೇಳಿದ್ದು ಪಾಪಚ್ಚಿಗೆ ಚೆನ್ನಾಗಿ ಕೇಳಿಸಿತು. ಒಂದೆರಡು ಮಾರು ದೂರ ಹೋದಮೇಲೆ ಅದು ತನ್ನ ಅಂಗಿಯ ಒಳಜೇಬಿನಿಂದ ಒಂದು ಸರಪಣಿಗಡಿಯಾರವನ್ನು ಹೊರಗೆಳೆದು ಅದನ್ನು ನೋಡುತ್ತಾ ಓಡಿತು.

ಪಾಪಚ್ಚಿಯೂ ಥಟಕ್ಕನೆದ್ದು ಅದರ ಹಿಂದೆ ಓಡಿದಳು. ಬಿಳಿಯ ಮೊಲ! ಗಡಿಯಾರ! ಕನ್ನಡದಲ್ಲಿ ಕೂಗಾಟ! ಓಟ!—ಇದರಲ್ಲಿ ಏನೋ



"ಅಯ್ಯೋ! ದೇವರೇ! ಹೊತ್ತಾಗಿಹೋಯಿತಲ್ಲಾ!"

ಸ್ವಾರಸ್ಯವಿರಬೇಕೆಂದು ಕುತೂಹಲದಿಂದ ಅವಳು ಅದನ್ನು ಹಿಂಬಾಲಿಸಿದಳು. ಹಾಗೆಯೇ, ಪಾಠಶಾಲೆಯ ಮೈದಾನದ ಅಂಚಿನವರೆಗೂ ಓಡಿದಳು.

ಅಲ್ಲಿ ಒಂದು ಬಿಲ; ತಕ್ಕಮಟ್ಟಿಗೆ ದೊಡ್ಡದಾಗಿಯೇ ಇತ್ತೆನ್ನಬಹುದು. ಅದರೊಳಕ್ಕೆ ಮೊಲವು ಧುಮುಕುವ ಹೊತ್ತಿಗೆ ಸರಿಯಾಗಿ, ದೇವರ ದಯೆಯಿಂದ, ಅವಳೂ ಅಲ್ಲಿಗೆ ಬಂದು ಸೇರಿದಳು. ಪಾಪಚ್ಚಿ ಕೊಂಚ ದುಡುಕು ಸ್ವಭಾವದವಳು. ಹಿಂದು ಮುಂದು ನೋಡದೆ ಅವಳೂ ಅದ ರೊಳಕ್ಕೆ ಧುಮುಕಿದಳು.

ಆ ಬಿಲವೋ,—ಅದೆಷ್ಟು ಆಳ! ಹೇಳಿದರೆ ಯಾರೂ ನಂಬುವುದಿಲ್ಲ. ಅರ್ಧಗಂಟೆಯ ಹೊತ್ತು ಕೆಳಕ್ಕೆ ಬೀಳುತ್ತಿದ್ದರೂ ಅದರ ತಳ ಸಿಕ್ಕಲಿಲ್ಲ. ಏಕೆ? ಪಾಪಚ್ಚಿ ಬೀಳುತ್ತಿದ್ದುದು ಅಷ್ಟು ನಿಧಾನವೋ? ಹಾಗೂ ಇರ ಬಹುದು. ಅಲ್ಲವೆ? ಹುಂ. ಹಾಗೆಯೇ ಇರಬೇಕು. ಏಕೆಂದರೆ, ಬೀಳು ತ್ತಿದ್ದಾಗಲೇ, ಅವಳಿಗೆ ಸುತ್ತಮುತ್ತ ನೋಡಲು ಅವಕಾಶ ಸಿಕ್ಕಿತು. ಮುಂದೆ ಯಾವ ಯಾವ ವಿಚಿತ್ರಗಳು ನಡೆಯಬಹುದು ಎಂದು ಯೋಚಿ ಸುತ್ತಲೇ ಬಿದ್ದಳು. ಆದರೆ, ತಾನು ಯಾವುದರ ಮೇಲೆ ಬೀಳಬಹುದೆಂದು ಕಂಡುಹಿಡಿಯಲು ಮಾತ್ರ ಸಾಧ್ಯವಾಗಲಿಲ್ಲ. ಕೆಳಗೆ ಬರಿಯ ಕತ್ತಲೆ. ಏನೂ ಕಾಣಿಸಲಿಲ್ಲ.

ಆ ಬಿಲದಲ್ಲಿ ಸುತ್ತಮುತ್ತ,—ಅಬ್ಬಬ್ಬ! ಎಷ್ಟೊಂದು ಬೀರುಗಳು! ಎಷ್ಟೊಂದು ಪಠಗಳು! ಅಡಿಗೆಯ ಪಾತ್ರೆಗಳೆಷ್ಟು! ಚೆನ್ನಪಟ್ಟಣದ ಆಟದ ಸಾಮಾನುಗಳೋ, ರಾಶಿ ರಾಶಿ! ಡಬ್ಬಗಳು, ಸಾಲಾಗಿ ಒಂದರ ಮೇಲೊಂದು ಲೆಕ್ಕವಿಲ್ಲದಷ್ಟು! ಬೀಳುವಾಗಲೇ ಕೈನೀಡಿ ಒಂದು ಬೀರುವಿ ನಿಂದ ಪಾಪಚ್ಚಿ ಒಂದು ಡಬ್ಬವನ್ನೆತ್ತಿದಳು. ಅದರ ಮೇಲೆ, "ಅಪ್ಪಟ ಹಾಲುಖೋವ" ಎಂದು ಒಂದು ಚೀಟಿ ಬರೆದು ಅಂಟಿಸಿತ್ತು. ಮುಚ್ಚಳ ತೆಗೆದು ನೋಡಿದಾಗ, ಅವಳ ಪುಣ್ಯಕ್ಕೆ ಸರಿಯಾಗಿ, ಅದರಲ್ಲಿ ಒಂದು ಚೂರುಕೂಡ ಇರಲಿಲ್ಲ.

ಬಂದ ಕೋಪದಲ್ಲಿ ಖಾಲಿ ಡಬ್ಬವನ್ನು ಕೆಳಕ್ಕೆಸೆದುಬಿಡೋಣ ವೆನ್ನಿಸಿತು. "ಅಲ್ಲಿ ಯಾರ ತಲೆಬುರುಡೆಯ ಮೇಲಾದರೂ ಬಿದ್ದರೆ,

ಗ್ರಹಚಾರ!'' ಎಂದು ಆಲೋಚಿಸಿ, ''ಬೇಡ! ದಾರಿಯಲ್ಲಿ ಯಾವುದಾದರೂ ಇನ್ನೊಂದು ಬೀರು ತೆರೆದಿದ್ದರೆ ಅದರಲ್ಲಿರಿಸಿಬಿಡುತ್ತೇನೆ'' ಎಂದು ತನಗೆ ತಾನೇ ಹೇಳಿಕೊಂಡಳು. ಹಾಗೆಯೇ ಮಾಡಿ ಸುಮ್ಮನಾದಳು.

''ಚಿಂತೆ ಇಲ್ಲ. ಹೀಗೊಂದುಸಾರಿ ಬಿದ್ದ ಮೇಲೆ, ನನಗೆ ಎಲ್ಲಿಂದ ಕೆಳಕ್ಕೆ ಬಿದ್ದರೂ ಹೆದರಿಕೆಯೇ ಇರುವುದಿಲ್ಲ. ನಾನು ಅಳುವುದೂ ಇಲ್ಲ. ಮಹಡಿ ಮೆಟ್ಟಲುಗಳನ್ನೆಲ್ಲಾ ಒಂದೇಸಲಕ್ಕೆ ಇಳಿದುಬಿಡುತ್ತೇನೆ. ಅಣ್ಣ, ಅಮ್ಮ, ಎಲ್ಲರೂ ಬಂದು ನೋಡಿ, 'ಪಾಪಚ್ಚಿಗೆ ಏನು ಧೈರ್ಯ!' ಅನ್ನುತ್ತಾರೆ. 'ಶಾಮೂ! ನೀನು ಹೀಗೆ ಬಿದ್ದು ತೋರಿಸು, ನೋಡೋಣ!' ಎಂದು ಅವನನ್ನು ಅಣಕಿಸುತ್ತಾರೆ. ಇನ್ನುಮುಂದೆ ಮನೆಯ ಮೇಲಿಂದ ಬಿದ್ದರೂ ಕೂಡ ನಾನು ಸದ್ದುಮಾಡದೆ ಸುಮ್ಮನಾಗಿಬಿಡುತ್ತೇನೆ. . . . '' ಹೀಗೆ ಜಂಬ ಕೊಚ್ಚಿಕೊಳ್ಳುತ್ತಾ ಬೀಳುತ್ತಿದ್ದಳು. ''ಇದೇನು? ಹಾಳು! ಎಷ್ಟು ಹೊತ್ತು ಬೀಳುತ್ತಿರುವುದು? ಮುಗಿಯುವುದೇ ಇಲ್ಲವೋ? ಈಗ ಸುಮಾರು ಎಷ್ಟು ಆಳ ಬಿದ್ದಿರಬಹುದು? ಭೂಗೋಳದ ಮಧ್ಯದತನಕ ಬಂದಿರಬೇಕು ಅಂತ ಕಾಣುತ್ತೆ. ಹಾಗಾದರೆ, ಎಷ್ಟು ಮೈಲಿ?. . . . ನಾಲ್ಕು ಸಾವಿರ ಮೈಲಿ! . . . . ಅಲ್ಲವೆ? ಹೂ. . . . ಹೌದು.'' (ಶಾಮು ಭೂವಿವರಣೆಯನ್ನು ಉರುಹೊಡೆಯುತ್ತಿರುವಾಗ ಪಾಪಚ್ಚಿಯೂ ಅವನೆದುರಿಗೆ ಕುಳಿತು ಚೂರುಪಾರು ತಿಳಿದುಕೊಂಡಿದ್ದಾಳೆ. ಅವಳ ತಂದೆ ಬಂದ ಮೇಲೆ ಅದನ್ನೆಲ್ಲಾ ಹೇಳಿದರೆ, ಅವರು ಬಹಳವಾಗಿ ಮುದ್ದಿಸುವರು. ಇಲ್ಲಿ, ಈ ಬಿಲದೊಳಗೆ ಹೊಗಳುವವರು ಯಾರೂ ಇಲ್ಲದಿದ್ದರೂ ಪಾಪಚ್ಚಿ ತನಗೆ ತಾನೇ ಮೆಚ್ಚುತ್ತಿದ್ದಳು.) ''. . . . ನಾಲ್ಕುಸಾವಿರ ಮೈಲಿ ದೂರ . . . . ಅಲ್ಲ, ಆಳ; ಅದಿರಲಿ, ಇಲ್ಲಿಯ ಸಮಾನಾಂತರ ವೃತ್ತ, ಅಕ್ಷಾಂಶ ರೇಖಾಂಶ ವೃತ್ತಗಳು ಏನೇನಿರಬಹುದು?. . . .'' (ಪಾಪಚ್ಚಿಗೆ ಈ ಪದಗಳ ಅರ್ಥವೇ ತಿಳಿಯದು, ಆದರೂ ಜಂಬ!)

ಪಾಪಚ್ಚಿ ಮಾತನಾಡುತ್ತಲೇ ಬೀಳುತ್ತಿದ್ದಳು. ''ಹೀಗೆಯೇ ನಾನು ಭೂಗೋಳದ ಆಚೆ ಬಿದ್ದರೆ? ಏನುಗತಿ? ಅಲ್ಲಿಯ ಜನರು ತಲೆಕೆಳಕಾಗಿ ನೇತಾಡುತ್ತಾ ನಡೆಯುವವರಲ್ಲವೆ? ನೋಡುವುದಕ್ಕೆ ಸೊಗಸಾಗಿರುತ್ತದೆ. ಅದು ಯಾವ ದೇಶ? ಆಸ್ಟ್ರೇರಿಕಾ, ಅಲ್ಲವೆ? (ಹೆಸರು ಏಕೋ ಸರಿಯಲ್ಲ

ವೆಂದು ಪಾಪಚ್ಚಿಗೆ ಅನುಮಾನವಾಯಿತು. ಆದರೂ, ಕೇಳಿ ನಗಲು ಶಾಮು ಇರಲಿಲ್ಲವಾದ್ದರಿಂದ ಅವಳಿಗೆ ಸಮಾಧಾನ.) ಇರಲಿ! ಅಲ್ಲಿಗೆ ಹೋದ ಮೇಲೆ ಊರ ಹೆಸರೇನೆಂದು ಯಾರನ್ನಾದರೂ ಕೇಳಿ ತಿಳಿದುಕೊಂಡರಾಯಿತು. ಕಾಣದ ಊರಿಗೆ ನಾಲಗೆಯೇ ದಾರಿ. 'ಅಮ್ಮಾ! ಇದು ಯಾವ ಊರು! ಆಸ್ಟ್ರೇರಿಕಾವೋ, ಸ್ಯೂನೀಲಂಡೋ?' ಎಂದು ಕೇಳಿದರಾಯಿತು. (ಎದುರಿಗೆ ಯಾರೋ ಆ ದೇಶದವರು ನಿಂತಿರುವ ಹಾಗೂ ಅವರನ್ನು ಕೈಮುಗಿದು ಕೇಳುವ ಹಾಗೂ ಪಾಪಚ್ಚಿ ಬೀಳುತ್ತಿರುವಾಗಲೇ ಅಭ್ಯಾಸ ಮಾಡಿಕೊಂಡಳು! ಆಮೇಲೆ,) ಇಲ್ಲ, ಇಲ್ಲ. ಹಾಗೆ ಪಾಪಿ ಪರದೇಶಿಯ ಹಾಗೆ ಬೀದಿಯಲ್ಲಿ ಹೋಗುವವರನ್ನು ಕೇಳುತ್ತಾ ಹೋದರೆ ಏನೂ ತಿಳಿಯದ ಮಂಕು ಅಂದಾರು....ಕೂಡದು....ಕೇಳಲೇ ಕೂಡದು....ಎಲ್ಲಿ ಯಾದರೂ ಬರೆದಿರುವುದಿಲ್ಲವೆ? ಓದಿಕೊಂಡರಾಯಿತು'' ಎಂದು ಹೇಳಿ ಕೊಂಡಳು.

ಕೆಳಕ್ಕೆ....ಕೆಳಕ್ಕೆ....ಇನ್ನೂ ಬೀಳುವುದು ನಿಂತಿರಲಿಲ್ಲ. ತಳ ಸಿಕ್ಕಲಿಲ್ಲ....ಪಾಪಚ್ಚಿ ಏನು ಮಾಡಿಯಾಳು? ಅವಳಿಗೆ ತುಂಬಾ ಬೇಜಾರಾಯಿತು. ಆಕಳಿಕೆ ಬಂತು. ಎಲ್ಲಿ ನಿದ್ದೆ ಬಂದುಬಿಡುವುದೋ ಎಂದು ಅವಳಿಗೆ ಭಯ. ಆದ್ದರಿಂದ ಸರ ಸರನೆ ಮಾತನಾಡುವುದಕ್ಕೆ ಪ್ರಾರಂಭ ಮಾಡಿದಳು. ''ಇವತ್ತು ರಾತ್ರಿಯೆಲ್ಲಾ ಪಿಲ್ಲಿ ನನ್ನನ್ನು ಹುಡುಕಾಡುತ್ತಾಳೆ. ಅವಳ ತಟ್ಟೆಗೆ ಹಾಲುಹಾಕುವುದನ್ನು ಅಮ್ಮ ಮರೆತುಬಿಟ್ಟರೆ ಏನು ಮಾಡುವುದು? ಶಾಮು ಜ್ಞಾಪಿಸುತ್ತಾನೆಯೋ, ಇಲ್ಲವೋ?.... ಪಿಲ್ಲಿ, ನೀನು ನನ್ನ ಜತೆಯಲ್ಲಿರಬೇಕಾಗಿತ್ತು, ಕಣೆ. ಆದರೆ, ನಿನಗೆ ತಿನ್ನುವುದಕ್ಕೆ ಇಲ್ಲಿ ಏನು ಸಿಕ್ಕುತ್ತೆ? ಇಲ್ಲಿ ಬಾವಲಿಗಳೇ ಇಲಿಗಳು. ಸಾಲದೇನು? ಬಾವಲಿಯೂ ಇಲಿಯ ಜಾತಿ ತಾನೆ? ಆದರೆ, ಬೆಕ್ಕು ಬಾವಲಿಯನ್ನು ತಿನ್ನುತ್ತದೆಯೇ? ಬಾವಲಿ....ಬೆಕ್ಕನ್ನು....ತಿನ್ನುತ್ತದೆಯೇ? ತಿನ್ನು....ಬಾವಲಿಯನ್ನು....ಬೆಕ್ಕುತ್ತದೆಯೇ?....'' ಎಂದು ಹೇಳುತ್ತಾ ಹೇಳುತ್ತಾ, ತೂಕಡಿಸುತ್ತಾ, ಆಕಳಿಸುತ್ತಾ, ಬೀಳುತ್ತಿದ್ದಳು. ಹಾಗೆಯೇ, ಒಂದು ಕನಸೂ ಆಯಿತು. ಕನಸಿನಲ್ಲಿ,—ಪಿಲ್ಲಿಯ ಕೈಹಿಡಿದು ನಡೆಸಿಕೊಂಡು ಪಾಪಚ್ಚಿ ಸ್ಕೂಲಿಗೆ ಹೋಗುತ್ತಾ ಇದ್ದಳು. ನಡುವೆ ದಾರಿಯಲ್ಲಿ

ಪಿಳ್ಳೆಯನ್ನು ನಿಲ್ಲಿಸಿ, "ನಿಜ ಹೇಳು! ಬಾವಲಿಯನ್ನು ತಿನ್ನುತ್ತೀಯೋ, ಇಲ್ಲವೋ?" ಎಂದು ಗದರಿಸುತ್ತಿದ್ದಳು. ಆಗ, ....'ಧೊಪ್!' ಏನು? ....ಅವಳು ತರಗೆಲೆಯ ಒಂದು ಗುಪ್ಪೆದಮೇಲೆ ಬಿದ್ದಳು.... ನಿದ್ದೆಯಿಂದೆದ್ದಳು....ತಳ ಸಿಕ್ಕಿತು.

---

## ಗಾಜಿನ ಮೇಜು

ಪಾಪಚ್ಚಿಗೆ ಕೊಂಚವೂ ನೋವಾಗಲಿಲ್ಲ. ಎದ್ದುಕುಳಿತು ಕಣ್ಣು ತಿಕ್ಕಿಕೊಂಡು ನಾಲ್ಕು ಕಡೆಯೂ ನೋಡಿದಳು. ತಲೆಯ ಮೇಲೆ ಕತ್ತಲೆ; ಏನೂ ಕಾಣಿಸಲಿಲ್ಲ. ಮುಂದುಗಡೆ ಒಂದು ಉದ್ದವಾದ ಓಣಿ. ಅದರ ಆಚೆ ಕೊನೆಯಲ್ಲಿ ಬಿಳಿಯ ಮೊಲ ಬಿರುಬಿರನೆ ನಡೆದು ಹೋಗುತ್ತಿತ್ತು. ಉಸಿರಾಡುವಷ್ಟು ಹೊತ್ತು ಕೂಡ ನಿಲ್ಲದೆ ಪಾಪಚ್ಚಿ ಅದರ ಹಿಂದೆ ಅತಿ ವೇಗವಾಗಿ ಓಡಿದಳು. ಹಾಗೆ ಓಡಿದ್ದು ಒಳ್ಳೆಯದೇ ಆಯಿತು. ಏಕೆಂದರೆ ಆ ಓಣಿ ಫಕ್ಕನೆ ಬಲಕ್ಕೆ ತಿರುಗಿತು. "ಅಯ್ಯೋ! ನನ್ನ ಕಿವಿ, ಮೀಸೆ ಹಾಳಾಗಿ ಹೋಯಿತು! ಎಷ್ಟು ಹೊತ್ತಾಗಿಹೋಯಿತು! ಏನು ಗತಿ!" ಎಂದು ಗಟ್ಟಿಯಾಗಿ ಗೊಣಗುಟ್ಟುತ್ತಾ ಮೊಲವು ಬಲಕ್ಕೆ ತಿರುಗುವ ಹೊತ್ತಿಗೆ ಸರಿಯಾಗಿ ಪಾಪಚ್ಚಿಯೂ ಅದರ ಹತ್ತಿರ ಬಂದು ಸೇರಿದಳು.

ಮೊಲದ ಹಿಂದೆಯೇ ಅವಳೂ ಬಲಕ್ಕೆ ತಿರುಗಿದಳು. ಅದರ ಬೆನ್ನ ಮೇಲೆಯೇ ದೃಷ್ಟಿಯನ್ನು ಯಾವಾಗಲೂ ಇಟ್ಟಿದ್ದು ಅದು ಎಲ್ಲಿಯೂ ತಪ್ಪಿಸಿಕೊಂಡು ಹೋಗದ ಹಾಗೆ ನೋಡಿಕೊಳ್ಳಬೇಕೆಂದು ತೀರ್ಮಾನಿಸಿದಳು......ಆದರೆ, ಮೊಲವು ಇದ್ದಕ್ಕಿದ್ದ ಹಾಗೆ ಕಣ್ಮರೆಯಾಗಿ ಹೋಯಿತು. ಅದರ ಸುಳಿವೇ ಸಿಕ್ಕಲಿಲ್ಲ. ಅಷ್ಟು ಬೇಗನೆ ಅದು ಮಾಯವಾದದ್ದು ಹೇಗೆಂದು ಗೊತ್ತಾಗಲೂ ಇಲ್ಲ! ಓಣಿಯೂ ಕೊನೆಗಂಡಿತು. ಅಲ್ಲಿ ಅಗಲವಾದ, ಹೆಚ್ಚು ಎತ್ತರವಿಲ್ಲದ ಒಂದು ದೊಡ್ಡ ಕೊಠಡಿ. ಅನೇಕ ಸಣ್ಣ ಸಣ್ಣ ದೀಪಗಳು ಅಲ್ಲಲ್ಲಿ ಮಿಣುಕುತ್ತಿದ್ದುವು. ಆದ್ದರಿಂದ, ಕೊಠಡಿಯಲ್ಲಿ ತಕ್ಕಮಟ್ಟಿಗೆ ಬೆಳಕಿತ್ತೆನ್ನಬಹುದು.

ಸುತ್ತಲೂ ಬಾಗಿಲುಗಳು ತುಂಬ ಇದ್ದುವು. ಆದರೆ, ಪಾಪಚ್ಚಿಗೆ ಮಾತ್ರ ಹೊರಗೆ ಹೊರಡಲು ಸಾಧಿಸಲಿಲ್ಲ. ಎಲ್ಲಕ್ಕೂ ಭದ್ರವಾಗಿ ಬೀಗ ಹಾಕಿತ್ತು. ಪಾಪ! ಪಾಪಚ್ಚಿ ಬೋನಿನಲ್ಲಿಟ್ಟ ಜಿಂಕೆಯ ಮರಿಯಂತೆ ಬೆದರಿದಳು. ಒಂದು ಕಡೆಯಿಂದ ಎಲ್ಲಾ ಬೀಗಗಳನ್ನೂ ಹಿಡಿದೆಳೆದು ತೆಗೆಯಲು ಪ್ರಯತ್ನಿಸಿದಳು. ಹಾಗೆಯೇ, ಇನ್ನೊಂದುಸಲ ಎಲ್ಲವನ್ನೂ ಪರೀಕ್ಷಿಸಿದಳು. ಕಡೆಗೆ, ಮನಸೋತು, ಬೇಸತ್ತು, ನಿರಾಶಳಾಗಿ ಕೊಠಡಿಯ ನಡುವೆ ಬಂದು ನಿಂತಳು. "ದೇವರೇ! ನಾನು ಇಲ್ಲಿಂದ ಹೇಗೆ ತಪ್ಪಿಸಿ ಕೊಳ್ಳಲಿ? ಮೊಲ ಎಲ್ಲಿಗೆ ಹೋಯಿತು, ಕಾಣೆನಲ್ಲಾ!" ಎಂದು ಅವಳು ವ್ಯಸನಪಟ್ಟಳು.

ಆಗ, ಅವಳ ಹತ್ತಿರವೇ ಇದ್ದ ಒಂದು ಗಾಜಿನ ಗುಂಡು ಮೇಜಿನ ಮೇಲೆ ಅವಳ ದೃಷ್ಟಿ ಬಿತ್ತು. ಅಲ್ಲೊಂದು ಚಿನ್ನದ ಬೀಗದಕೈ ಥಳಥಳನೆ ಹೊಳೆಯುತ್ತಿತ್ತು. ಅದು ಅಲ್ಲಿನ ಬೀಗಗಳಲ್ಲಿ ಯಾವುದಾದರೂ ಒಂದಕ್ಕೆ ಸರಿಹೋಗಬಹುದೆಂದು ಪಾಪಚ್ಚಿಗೆ ತೋರಿತು. ಆದರೆ, ಅವಳ ಅದೃಷ್ಟಕ್ಕೆ ಸರಿಯಾಗಿ, ಬೀಗಗಳೇ ಕೊಂಚ ದೊಡ್ಡವೋ, ಇಲ್ಲದೆ ಹೋದರೆ ಬೀಗದ ಕೈಯೇ ಕೊಂಚ ಚಿಕ್ಕದೋ, ಏಕೋ ಏನೋ ಒಂದು ಬಾಗಿಲನ್ನೂ ತೆರೆಯಲು ಸಾಧ್ಯವಾಗಲಿಲ್ಲ. ಇನ್ನೊಮ್ಮೆ ಎಲ್ಲಾ ಬೀಗಗಳನ್ನೂ ಪರೀಕ್ಷಿ ಸೋಣವೆಂದು ಅವಳು ಕೊಠಡಿಯ ಸುತ್ತ ಸಂಚಾರಮಾಡಿದಳು. ಆಗ, ಅದುವರೆಗೂ ತನ್ನ ಕಣ್ಣಿಗೆ ಬೀಳದ ಬಿಳಿಯ ರೇಷ್ಮೆಯ ತೆರೆಯೊಂದನ್ನು ಕಂಡು ಆಶ್ಚರ್ಯದಿಂದ ನೋಡಿದಳು. ಅದರ ಹಿಂದೆ ಸುಮಾರು ಒಂದು ಒಂದೂವರೆ ಗೇಣು ಎತ್ತರದ ಸಣ್ಣದೊಂದು ಬಾಗಿಲು ಕಾಣಿಸಿತು. ಅದಕ್ಕೆ ಹಾಕಿದ್ದುದು ಒಂದು ಚಿನ್ನದ ಬೀಗ! ಸರಸರನೆ ತನ್ನ ಕೈಯಲ್ಲಿದ್ದ ಬೀಗದ ಕೈಯಿಂದ ಅದನ್ನು ತೆರೆದಳು. ಪಾಪಚ್ಚಿಗೆ ಪರಮಾನಂದವಾಯಿತು.

ಆ ಬಾಗಿಲ ಹತ್ತಿರ ಮಂಡಿಯೂರಿ ಕುಳಿತು ತಲೆಬಗ್ಗಿಸಿ ಹೊರಗೆ ನೋಡಿದಳು. ಅಲ್ಲಿ ಬಹಳ ವಿಚಿತ್ರವಾದ ಒಂದು ಮನೋಹರ ದೃಶ್ಯವು ಕಾಣಿಸಿತು. ಎಂತಹ ಸುಂದರವಾದ ಹೂದೋಟ! ಲಾಲ್‌ಬಾಗಿಗಿಂತ ಸಾವಿರಪಾಲು ಸೊಗಸು! ಕಾಮನಬಿಲ್ಲಿನಂತೆ ಬಣ್ಣಗಳನ್ನು ಚೆಲ್ಲಿ, ಒಂದರ ಮೇಲೊಂದು ಹಾಯುವ ನೀರಿನ ಬುಗ್ಗೆಗಳು! ಬಣ್ಣ ಬಣ್ಣದ ಹೂವುಗಳು!

ಹಸುರು ಹುಲ್ಲು! ಅಮೃತಶಿಲೆಯಿಂದ ಮಾಡಿದ ಪ್ರತಿಮೆಗಳ ಸಾ
ಹಾಡುತ್ತಾ ಕುಣಿದು ಹಾರುವ ಹಕ್ಕಿಗಳು. ಹಣ್ಣುಗಳು ಉದುರಿದ್ದ
ಕೆಂಪಾಗಿ ಕಾಣುತ್ತಿದ್ದ ಕಾಲುದಾರಿಗಳು. ಅಲ್ಲಲ್ಲಿ ಕೆಲವರು ಆಳುಗಳ
ಇನ್ನು ಯಾರೂ ಆ ಉದ್ಯಾನದಲ್ಲಿ ಸುಳಿದಾಡುತ್ತಿರಲಿಲ್ಲ.

ಆ ಹಾಳು ಬಾಗಿಲು ಇನ್ನೂ ಕೊಂಚ ಎತ್ತರವಾಗಿರಬಾರದಾಗಿ
ಪಾಪಚ್ಚಿಯ ಅವಸ್ಥೆ, 'ಕೈಗೆ ಬಂದ ತುತ್ತು, ಬಾಯಿಗಿಲ್ಲ,' ಎನ
ಹಾಗಾಯಿತು. ಅವಳ ತಲೆ ಕೂಡ ಆ ಬಾಗಿಲಿನಲ್ಲಿ ಹಿಡಿಯುವಂತಿರ
"ಅಥವಾ, ಒಂದುವೇಳೆ ನನ್ನ ತಲೆಯನ್ನು ಹೇಗಾದರೂ ತೂರಿಸಿದ
ಕೈಕಾಲುಗಳಿಲ್ಲದೆ, ತೋಳುಗಳಿಲ್ಲದೆ ಅದು ಮಾತ್ರ, ಪಾಪ, ಒಂಟಿಯ
ಹೋಗಿ ಏನು ಮಾಡೀತು? ತಸ್ವೀರು ತೆಗೆಯುವ ಕ್ಯಾಮೆರಾದ ಕಾಲು
ಹಾಗೆ ನನ್ನ ದೇಹವನ್ನೂ ಬೇಕು ಬೇಕಾದಾಗ ಚಿಕ್ಕದು ದೊಡ್ಡ
ಮಾಡಿಕೊಳ್ಳಲು ಸಾಧ್ಯವಾಗುವುದಾದರೆ ಎಷ್ಟು ಅನುಕೂಲವಾಗಿರುತ್ತಿ
ಎಂದು ಮುಂತಾಗಿ ಪಾಪಚ್ಚಿ ಯೋಚಿಸಿದಳು.

ಬಾಗಿಲ ಬಳಿ ಮಲಗಿಕೊಂಡು ಉದ್ಯಾನವನ್ನು ನೋಡುತ್ತಾ ಬಾ
ಚಪ್ಪರಿಸುತ್ತಿದ್ದರೆ ಫಲವೇನು! ಯಾವುದಾದರೊಂದು ಉಪಾಯದಿ
ತೋಟಕ್ಕೆ ನುಗ್ಗಲೇಬೇಕೆಂದು ಅವಳು ನಿರ್ಧರಿಸಿದಳು. ಮನಸ್ಸಿ
ಮನಸ್ಸಿನಿಂದ ಎದ್ದು ಗಾಜಿನ ಮೇಜಿನ ಹತ್ತಿರಕ್ಕೆ ಬಂದಳು.
'ಹಿರಿಯ ಮಕ್ಕಳನ್ನು ಕಿರಿದು ಮಾಡುವ ವಿಧಾನ' ಎಂಬ ಒ
ಪುಸ್ತಕವನ್ನೋ, ಇಲ್ಲದಿದ್ದರೆ, ದೊಡ್ಡ ಬಾಗಿಲುಗಳನ್ನು ತೆಗೆಯ
ದೊಡ್ಡದೊಂದು ಬೀಗದ ಕೈಯನ್ನೋ ಅಷ್ಟು ಹೊತ್ತಿಗೆ ಎಲ್ಲಿಂದಲಾದ
ಯಾರಾದರೂ ತಂದುಹಾಕಿರಬಹುದೆಂಬ ಭರವಸೆ, ಆಸೆ.

ಆದರೆ,...."ಇದೇನಿದು? ಮೊದಲು ಇಲ್ಲಿ ಇರಲೇ ಇಲ್ಲ..
ಆಶ್ಚರ್ಯ! ನಾನು ಯೋಚನೆಮಾಡಿದ ಹಾಗೆಯೇ ಆಗಿದೆ!"....

ಮೇಜಿನ ಮೇಲೆ ಒಂದು ಸಣ್ಣ ಸೀಸೆ. ಒಂದು ಪಾವು ಸೀರು ಹಿಡಿ
ಬಹುದು. ಅದರ ಕತ್ತಿಗೊಂದು ಪಟ್ಟಿ. ಅದರಲ್ಲಿ "ಕು ಡಿ ಯಿ ರಿ" ಎ
ದಪ್ಪ ದಪ್ಪವಾದ ಅಕ್ಷರಗಳಲ್ಲಿ ಅಚ್ಚು ಹಾಕಿತ್ತು. ಅಂದರೆ, ಅದನ್ನು ಓ

ತಕ್ಷಣವೇ ಪಾಪಚ್ಚಿ ತೆಗೆದುಕೊಂಡು ಕುಡಿದಳೆಂದು ತಿಳಿಯಬೇಡಿ. ಇಲ್ಲ. ಪಾಪಚ್ಚಿ ಅಷ್ಟು ಪೆಚ್ಚು ಹುಡುಗಿಯೇನೂ ಅಲ್ಲ. ಶಾಮುವಾಗಿದ್ದರೆ ಅದನ್ನು ಆಗಲೇ ಕುಡಿದರೂ ಕುಡಿಯುತ್ತಿದ್ದನೋ ಏನೋ? ಆದರೆ, ಪಾಪಚ್ಚಿ, "ಯಾವ ಔಷಧಿ ಸೀಸೆಯನ್ನು ಕಂಡರೂ ಮೊದಲು 'ವಿಷ' ಎಂದು ಒಂದು ಕೆಂಪು ಚೀಟಿ ಅಂಟಿಸಿದೆಯೋ ಇಲ್ಲವೋ ಎಂದು ನೋಡ ಬೇಕು. ಅನಂತರ, ಕುಡಿಯಬೇಕೋ, ಬಿಡಬೇಕೋ, ಯೋಚನೆ ಮಾಡೋದು" ಎಂದು ಹೇಳಿಕೊಂಡಳು. ಏಕೆಂದರೆ, ಅವಳು ಕೇಳಿದ್ದ ಅನೇಕ ಕಥೆಗಳಲ್ಲಿ ಚಿಕ್ಕ ಚಿಕ್ಕ ಮಕ್ಕಳು ಸಣ್ಣ ವಿಷಯಗಳನ್ನು ಸಮಯದಲ್ಲಿ ಮರೆತದ್ದರಿಂದ ಅನೇಕ ಅನಾಹುತಗಳಿಗೆ ಸಿಕ್ಕಿಕೊಂಡಿದ್ದರು; ದೊಡ್ಡವರು ಕೊಟ್ಟ ಎಚ್ಚರಿಕೆಗೆ ಅವರು ಕಿವಿಗೊಟ್ಟಿರಲಿಲ್ಲ. ಪಾಪಚ್ಚಿ ಅವೆಲ್ಲವನ್ನೂ ಯಾವಾಗಲೂ ನೆನಪಿನಲ್ಲಿಟ್ಟಿದ್ದಳು; ಉದಾಹರಣೆಗಾಗಿ,—ಕಾದ ಕಬ್ಬಿಣ ವನ್ನು ಕೈಯಿಂದ ಹಿಡಿದರೆ ಸುಡುತ್ತದೆ, ಚಾಕುವಿನಿಂದ ಬೆರಳನ್ನು ಕುಯ್ದರೆ ನೋವಾಗುತ್ತದೆ, ರಕ್ತ ಬರುತ್ತದೆ, ಕಾಲಿನ ಮೇಲೆ ಭಾರವಾದ ಸಾಮಾನು ಬಿದ್ದರೆ ಕಣ್ಣಲ್ಲಿ ನೀರು ಬರುತ್ತದೆ, 'ವಿಷ' ಎಂಬ ಚೀಟಿಯನ್ನಂಟಿ ಸಿರುವ ಸೀಸೆಯೊಳಗಿನ ವಸ್ತುವನ್ನು ಕುಡಿದರೆ ಮೈಗೆ ಕೆಡಕಾಗುತ್ತದೆ... —ಇತ್ಯಾದಿ.

ಆದರೆ, ಆ ಸೀಸೆಯಲ್ಲಿ ಅಂಥಾದ್ದು ಏನೂ ಬರೆದಿರಲಿಲ್ಲ. "ಕು ಡಿ ಯಿ ರಿ" ಅಷ್ಟೆ. ನಾಲ್ಕೇ ಅಕ್ಷರ. ಮುದ್ದಾಗಿ ಗುಂಡು ಗುಂಡಗೆ ಅಚ್ಚಾಗಿತ್ತು. ಕುಡಿಯುವುದಕ್ಕೆ ಮೊದಲು ಒಂದು ತೊಟ್ಟನ್ನು ನಾಲಗೆಯ ತುದಿಗೆ ತೊಟಕಿಸಿಕೊಂಡು ರುಚಿನೋಡಿದಳು. ಬಹಳ ಚೆನ್ನಾಗಿತ್ತು. ಬೇಲದ ಹಣ್ಣಿನ ಪಾನಕ, ಸೊಗದೆ ಬೇರಿನ ಷರಬತ್ತು, ಮಾವಿನ ಹಣ್ಣಿನ ರಸಾಯನ, ಇವು ಮೂರರ ರುಚಿಯೂ ವಾಸನೆಯೂ ಅದರಲ್ಲಿ ಸೇರಿತ್ತು. ಕೊಂಚವೂ ಅನುಮಾನಿಸದೆ ಪಾಪಚ್ಚಿ ಎಲ್ಲವನ್ನೂ ಕುಡಿದೇಬಿಟ್ಟಳು.

"ಹಾ! ಇದೇನು! ನಾನು ಪುಟಾಣಿ ಹುಡುಗಿಯಾಗುತ್ತಿದೇನೆ!" ಎಂದು ಪಾಪಚ್ಚಿ ಬೆಚ್ಚಿದಳು. ಹೌದು. ಅವಳು ಹೇಳಿದ್ದು ನಿಜ. ಬಹಳ ಬೇಗನೆ ಒಂದು ಗೇಣು ಎತ್ತರದ ಹುಡುಗಿಯಾಗಿಬಿಟ್ಟಿದ್ದಳು. ಆಗ, ಅವಳ ಮುಖ ಸಂತೋಷದಿಂದ ಅರಳಿತು. ಸಣ್ಣ ಬಾಗಿಲಿನಿಂದ ಹೊರಗೆ ಹೋಗಿ




"ಹಾ! ಇದೇನು! ನಾನು ಪುಟಾಣಿ ಹುಡುಗಿಯಾಗುತ್ತಿದೇನೆ!"

ಆ ಉದ್ಯಾನವನ್ನು ಕಣ್ಣಾರೆ ನೋಡಬಹುದೆಂದು ಅವಳು ಹಿಗ್ಗಿದಳು. ಆದರೆ, ಅವಳಿಗೆ ಕೊಂಚ ಹೆದರಿಕೆಯೂ ಆಯಿತು. "ಹೀಗೆಯೇ ಚಿಕ್ಕ ದಾಗುತ್ತಾ ಆಗುತ್ತಾ ಉರಿಯುವ ಮೋಂಬತ್ತಿಯ ಹಾಗೆ, ಏನೂ ಉಳಿಯದೆ ನಾನು ಕರಗಿಹೋಗಿಬಿಟ್ಟರೆ ಏನು ಗತಿ? ಆಗ ನಾನು ಹೇಗಿರು ತ್ತೇನೆ?" ಎಂದು ಯೋಚಿಸಿದಳು. ಉರಿದು ಮುಗಿದು ಏನೂ ಉಳಿಯದ ಮೋಂಬತ್ತಿ ಹೇಗಿರುತ್ತದೆ—ಎಂದು ಮನಸ್ಸಿನಲ್ಲಿಯೇ ಚಿತ್ರಿಸಲು ಯತ್ನಿ ಸಿದಳು. ಅದನ್ನು ಯಾರೂ ನೋಡಿಲ್ಲವಾದ್ದರಿಂದ ಅವಳಿಗೂ ಅದು ಬಗೆಹರಿಯಲಿಲ್ಲ. ದೇವರ ದಯೆಯಿಂದ ಅವಳಿಗದು ತಿಳಿಯಬೇಕಾಗಿಯೂ ಇರಲಿಲ್ಲ. ಏಕೆಂದರೆ, ಔಷಧಿಯ ಪ್ರಭಾವ ಬೇಗ ಕಡಮೆಯಾಗುತ್ತಾ ಬಂತು. ಚಿಕ್ಕ ಚಿಕ್ಕದಾಗುವುದು ನಿಂತುಹೋಯಿತು.

ಪಾಪಚ್ಚಿ ತೋಟದ ಬಾಗಿಲ ಕಡೆ ಬೇಗ ಬೇಗ ನಡೆದಳು. ಆದರೆ, ಮೊದಲು ಹಿಂದಿರುಗಿದಾಗ ಅವಳು ಆ ಬಾಗಿಲ ಬೀಗವನ್ನು ಹಾಕಿ ಬಿಟ್ಟಿದ್ದಳು. ಬೀಗದ ಕೈಯನ್ನು ಯಥಾಸ್ಥಿತಿ ಗಾಜಿನ ಮೇಜಿನ ಮೇಲೆ ಇರಿಸಿದ್ದಳು. ಈಗ ಅದನ್ನು ತೆಗೆಯುವುದು ಹೇಗೆ? ಕೈಗೆ ಎಟಕದ ಆ ಮೇಜಿನಿಂದ ಬೀಗದ ಕೈಯನ್ನು ಹೇಗೆ ಸಂಪಾದಿಸುವುದು? ಮೇಜಿನ ಕಾಲನ್ನು ಹಿಡಿದು ಹತ್ತಲು ಶ್ರಮಿಸಿ ಅವಳು ಜಾರಿ ಬಿದ್ದಳು. ಪಾಪ! ಪಾಪಚ್ಚಿ ಆಸೆಪಟ್ಟದ್ದೆಲ್ಲವೂ ಹಾಳಾಯಿತು. ಇನ್ನೇನು ಮಾಡುವುದು? ಅಳುತ್ತಾ ಕುಳಿತಳು....

"ಸಾಕು. ನಿಲ್ಲಿಸು. ಬಾಯಿಮುಚ್ಚು. ಅತ್ತರೆ ಇಲ್ಲಿ ಯಾರೂ ಬಂದು ಎತ್ತಿಕೊಳ್ಳುವುದಿಲ್ಲ." ಇದು ಪಾಪಚ್ಚಿ ತನಗೆ ತಾನೇ ಹೇಳಿ ಕೊಂಡ ಮಾತು. ಹೀಗೆ ತನಗೆ ತಾನೇ ಬೈದುಕೊಂಡು, ಹೊಡೆದು ಕೊಂಡು, ಬುದ್ಧಿವಾದ ಹೇಳಿಕೊಂಡು, ಸಮಾಧಾನ ತಂದುಕೊಳ್ಳು ವುದು ಅವಳ ಪದ್ಧತಿ. ಹಿಂದೆ ಒಂದುಸಲ ಶಾಮುವಿನ ಪುಸ್ತಕದ ಒಂದು ಹಾಳೆಯನ್ನು ಹರಿದದ್ದಕ್ಕಾಗಿ ತನಗೆ ತಾನೆ ಕಿವಿ ಹಿಂಡಿಕೊಂಡು ಅದು ಹುಣ್ಣಾಗಿ ಐದಾರು ದಿನ ಆಸ್ಪತ್ರೆಗೆ ಹೋಗಬೇಕಾಗಿ ಬಂದಿತ್ತು. ಇನ್ನೊಂದುಸಾರಿ ತಾನೂ ಪಾಪಚ್ಚಿಯೂ (ಶಾಮು ಸ್ಕೂಲಿಗೆ ಹೋದ ಮೇಲೆ ಮನೆಯಲ್ಲಿ ಅವಳೊಂದಿಗೆ ಆಟವಾಡಲು ಬೇರೆ ಯಾರೂ ಇರು

ತ್ತಿರಲಿಲ್ಲ. ಅವಳ ಸ್ಕೂಲು ಬೆಳಗ್ಗೆ ಮುಗಿದಿರುತ್ತದೆ. ಆದ್ದರಿಂದ, ಅವಳು ತಾನೇ ಇಬ್ಬರು ಎಂದು ಭಾವಿಸಿಕೊಳ್ಳುವಳು.) ಕಣ್ಣಾಮುಚ್ಚಾಲೆ ಆಟವಾಡುತ್ತಾ ಪಾಪಚ್ಚಿಯು ಹತ್ತಿರ ಯಾವುದೋ ಒಂದು ಸುಳ್ಳು ಹೇಳಿದ್ದಕ್ಕಾಗಿ ತನ್ನನ್ನೇ ಬಹಳವಾಗಿ ಹೊಡೆದುಕೊಂಡುಬಿಟ್ಟಿದ್ದಳು. ಹೀಗೆಯೇ, ಯಾರೂ ಹತ್ತಿರದಲ್ಲಿ ಇಲ್ಲದಿದ್ದರೆ ತಾನು ಇಬ್ಬರೆಂದು ಭಾವಿಸಿ ಕೊಂಡು ಮಾತನಾಡುವುದು ಅವಳಿಗೆ ಅಭ್ಯಾಸವಾಗಿತ್ತು. "ಆದರೆ, ಈಗ ನನ್ನನ್ನು ಇಬ್ಬರೆಂದು ಇಟ್ಟುಕೊಳ್ಳುವುದಕ್ಕಾಗುವುದೇ ಇಲ್ಲ. . ಸರಿಯಾದ ಹುಡುಗಿ ಒಬ್ಬಳಿಗೆ ಕೂಡ ಸಾಲದು ಈ ನನ್ನ ವಾಮನಾವತಾರ!" ಎಂದು ಅಂದುಕೊಂಡಳು.

ಪಾಪಚ್ಚಿ ಮೇಜಿನ ಕೆಳಗೆ ನೆಲದ ಮೇಲೆ ಕುಳಿತು ಕೊರಗುತ್ತಿದ್ದಳು. ಚಿನ್ನದ ಬೀಗದ ಕೈಯ ಹೊಳಪು ಎಲ್ಲೋ ಆಕಾಶದಲ್ಲಿ ಕಾಣಿಸುತ್ತಿತ್ತು. ಅಳುವನ್ನು ಕೊಂಚ ಹೊತ್ತಿನ ಮೇಲೆ ನಿಲ್ಲಿಸಿ ಅವಳು ಸುತ್ತಮುತ್ತ ಇನ್ನೊಂದು ಸಾರಿ ನೋಡಿದಳು. ಗೋಡೆಯ ಅಂಚಿನಲ್ಲಿಯೇ ನಡೆದು ಕೊಂಡು ಬಂದಳು. ಇನ್ನು ಯಾವುದಾದರೂ ಬಾಗಿಲುಗಳಾಗಲಿ, ತೆರೆ ಗಳಾಗಲಿ ಇವೆಯೇ ಎಂದು ಪರೀಕ್ಷಿಸಿದಳು. ಯಾವುದೂ ಇರಲಿಲ್ಲ.

ಆಗ, ಅಲ್ಲಿ, ಅವಳು ಕುಳಿತಿದ್ದ ಜಾಗದಲ್ಲಿಯೇ ಒಂದು ಸಣ್ಣ ಗಾಜಿನ ಪೆಟ್ಟಿಗೆ! ಶಾಮುವಿನ "ಜಾಮೆಟ್ರಿ" ಪೆಟ್ಟಿಗೆಯಷ್ಟೆ ಚಿಕ್ಕದು. ಪಾಪಚ್ಚಿ ಅದನ್ನು ತೆರೆದುನೋಡಿದಳು. ಅದರಲ್ಲಿ ಒಂದು ಜಿಲೇಬಿ. "ತಿನ್ನಿರಿ" ಎಂಬ ಮೂರು ಕನ್ನಡ ಅಕ್ಷರಗಳನ್ನು ಒಂದಕ್ಕೊಂದು ಸೇರಿಸಿ ಹೆಣೆದ ಹಾಗೆ ಇತ್ತು ಅದರ ಆಕಾರ. "ಏನಾದರೂ ಆಗಲಿ! ಇದನ್ನು ತಿಂದು ಬಿಡುತ್ತೇನೆ. ಎತ್ತರವಾಗಿ ಬೆಳೆದರೆ ಬೀಗದ ಕೈಯನ್ನು ತೆಗೆದುಕೊಳ್ಳ ಬಹುದು. ಇನ್ನೂ ಚಿಕ್ಕದಾದರೆ, ಎತ್ತರ ಕಡಮೆಯಾದರೆ, ಬಾಗಿಲ ಸಂದಿನಿಂದಲೇ ತೋಟಕ್ಕೆ ನುಗ್ಗಿಬಿಡಬಹುದು. ಅಂತು, ಜಿಲೇಬಿ ಚೆನ್ನಾಗಿರುವ ಹಾಗಿದೆ. ಆದದ್ದಾಗಲಿ!" ಎಂದು ಪಾಪಚ್ಚಿ ನಿರ್ಧರಮಾಡಿದಳು.

ತನ್ನ ಎತ್ತರ ಹೆಚ್ಚುತ್ತದೋ, ಕಡಮೆಯಾಗುವುದೋ, ಎಂಬುದನ್ನು ಗೊತ್ತುಮಾಡಲು ಮೊದಲು ತನ್ನ ಅಂಗೈಯನ್ನು ತಲೆಯ ಮೇಲಿಟ್ಟು ಕೊಂಡಳು. ಅನಂತರ, ಒಂದು ಚೂರನ್ನು ಮುರಿದು ಬಾಯಿಗೆ ಹಾಕಿ

ಕೊಂಡಳು. ಏನೂ ಆಗಲಿಲ್ಲ. ಹಿಂದೆ ಇದ್ದ ಹಾಗೆಯೇ! ಪಾಪಚ್ಚಿಗೆ ಕೊಂಚ ಆಶಾಭಂಗವಾಯಿತು. ನಿಜವಾಗಿ ನೋಡಿದರೆ ಅವಳ ವ್ಯಥೆಗೆ ಯಾವ ಕಾರಣವೂ ಇರಲಿಲ್ಲ, ಅಲ್ಲವೆ? ಸಾಧಾರಣವಾಗಿ ಜಿಲೇಬಿ ತಿಂದರೆ ಕೂಡಲೆ ಮಕ್ಕಳ ಎತ್ತರ ಎಳ್ಳಷ್ಟೂ ಹೆಚ್ಚುವುದಿಲ್ಲ. ಆದರೂ, ಅಲ್ಲಿ, ಪಾತಾಳದಲ್ಲಿ, ತಿಂದಿದ್ದೆಲ್ಲಕ್ಕೂ ಒಂದು ಅದ್ಭುತವಾಗಲೇ ಬೇಕೆಂದು ಅವಳು ಎದುರುನೋಡುತ್ತಿದ್ದಳು. ಏನೂ ಆಗಲಿಲ್ಲ. ಸರಿ, ಇನ್ನೇನು ಮಾಡುವುದು? ಜಿಲೇಬಿಯ ರುಚಿ ಚೆನ್ನಾಗಿತ್ತು. ಆದ್ದರಿಂದ, ಅವಳು ಅದನ್ನು ಸಂಪೂರ್ಣ ತಿಂದು ಮುಗಿಸಿದಳು.

---

## ಕಣ್ಣೀರಿನ ಕೆರೆ

"ಇದೀಗ ತಮಾಷೆ! ಒಳ್ಳೆ ಸೊಗಸಾಗಿದೆ!" ಎಂದು ಪಾಪಚ್ಚಿ ಕೂಗಿಕೊಂಡಳು. "ಅಣ್ಣನ ಕ್ಯಾಮೆರಾದ ಕಾಲಿನ ಹಾಗೆ ನಾನೂ ಉದ್ದವಾಗುತ್ತಿದ್ದೇನೆ!....ಅಯ್ಯೋ! ನನ್ನ ಕಾಲುಗಳೆಲ್ಲಿ? ಅಷ್ಟು ದೂರದಲ್ಲಿವೆ! ಸರಿ! 'ಕಾಲುಗಳೇ! ನಾನು ಹೋಗಿಬರುತ್ತೇನೆ....ಪಾಪ! ನಿಮಗೆ ಇನ್ನು ಜೋಡು ಮೆಟ್ಟಿಸುವವರು ಯಾರು? ನನ್ನಿಂದ ಅಷ್ಟು ಬಗ್ಗಲು ಸಾಧ್ಯವಿಲ್ಲ. ನೀವಾಯಿತು, ನಿಮ್ಮ ಪಾಡಾಯಿತು. ಇನ್ನು ಮೇಲೆ ನನ್ನನ್ನು ನೆಚ್ಚಬೇಡಿ'....ಆದರೆ, ಕಾಲುಗಳ ಸ್ನೇಹ ಸಂಪಾದಿಸದಿದ್ದರೆ, ನಾಳೆಯಿಂದ ಅವು ನನ್ನನ್ನು ಅಲ್ಲಿ ಇಲ್ಲಿ ಕರೆದುಕೊಂಡುಹೋಗಬೇಕಲ್ಲ. ಇರಲಿ! ಅಣ್ಣ ಗೌರಿ ಹಬ್ಬಕ್ಕೆ ಸರಿಯಾಗಿ ಗೊಲಸು ಮಾಡಿಸಿಕೊಡುತ್ತೇನೆ ಅಂತ ಹೇಳಿದ್ದ. ಅದನ್ನು ಕೊಟ್ಟರೆ ಅವಕ್ಕೆ ತೃಪ್ತಿಯಾಗಬಹುದು....ಅದನ್ನು ಕೊಡುವುದು ತಾನೆ ಹೇಗೆ?....ಚಿಂತೆ ಇಲ್ಲ, ಟಪಾಲಿಗೆ ಹಾಕಿದರಾಯಿತು. ವಿಳಾಸ?

ಚಿ. ಸೌ. ಹ. ಕುಂ. ಶ್ರೀ. ಪಾಪಚ್ಚಿಯ ಬಲಗಾಲು,<br>
ಶಾಮು ಓದುವ ಕೊಠಡಿಯ ನೆಲ,<br>
ನಮ್ಮ ಮನೆ ಬೀದಿ,<br>
ಮೈಸೂರು.

. . . . ಥೂ. ಪಾಪಚ್ಚಿ! ಸಾಕು, ಸುಮ್ಮನಿರೆ. ಯಾಕೊ ಬರ ಬರುತ್ತಾ ನಿನ್ನ ಮಾತು ಹುಚ್ಚು ಹುಚ್ಚು. ಸಾಕು, ನಿಲ್ಲಿಸೆ, ನಿನ್ನ ಪುಣ್ಯಕ್ಕೆ." ಹೀಗೆ ಮಾತನಾಡುತ್ತಾ ಬಹು ಎತ್ತರವಾಗಿ ಬೆಳೆದಳು.

ಅಷ್ಟರೊಳಗೆ ಅವಳ ತಲೆ ಮೇಲುಚಾವಣಿಗೆ ತಗುಲಿತು. ಅವಳು ಸುಮಾರು ಒಂಬತ್ತಡಿಯಷ್ಟು ಬೆಳೆದುಬಿಟ್ಟಿದ್ದಳು. ಚಿನ್ನದ ಬೀಗದ ಕೈಯನ್ನು ಕೈಯಲ್ಲಿ ಹಿಡಿದುಕೊಂಡು ಒಂದೇ ಹೆಜ್ಜೆಗೆ ತೋಟದ ಬಾಗಿಲ ಹತ್ತಿರ ಬಂದಳು. ಆದರೆ, ಪ್ರಯೋಜನವೇನು? ಹೊರಗೆ ಹೋಗುವುದು ಹಾಗಿರಲಿ, ಕಣ್ಣಿನಿಂದ ಆ ತೋಟವನ್ನು ಇನ್ನೊಮ್ಮೆ ನೋಡುವುದಕ್ಕೂ ಕೂಡ ಸಾಧ್ಯವಾಗಲಿಲ್ಲ. ಪಾಪ! ತನ್ನ ಸಂಕಟವನ್ನು ಹೇಳಿಕೊಳ್ಳುವುದಕ್ಕೆ ಅಲ್ಲಿ ಒಂದು ಪ್ರಾಣಿಯಾದರೂ ಇರಬೇಕಲ್ಲ! . . . . ಇನ್ನೇನು ಮಾಡುತ್ತಾಳೆ? ಅಳುತ್ತಾ ಕುಳಿತಳು.

"ನಾಚಿಕೆ ಗೀಚಿಕೆ ಇಲ್ಲವೇನೆ? ಕಂಬದ ಹಾಗೆ ಬೆಳೆದುಬಿಟ್ಟು ಎಳೆಯ ಕೂಸಿನಂತೆ ಬಳಬಳನೆ ಕಣ್ಣೀರು ಸುರಿಸುತ್ತಾಳೆ. ಸಾಕು. ನಿಲ್ಲಿಸೆ" ಎಂದು ಎಷ್ಟು ಹೇಳಿಕೊಂಡರೂ ಪ್ರವಾಹ ಬತ್ತಲಿಲ್ಲ. ಕನ್ನಂಬಾಡಿ ಕಟ್ಟೆಯ ಕೆಳಬಾಗಿಲುಗಳನ್ನು ತೆರೆದ ಹಾಗೆ! ಅವಳ ಸುತ್ತ ನೀರು ಐದಾರು ಅಂಗುಲ ಆಳದ ಒಂದು ಕೆರೆಯ ಹಾಗಾಗಿಬಿಟ್ಟಿತ್ತು. ಯಾವುದನ್ನೂ ಗಣಿಸದೆ, ಯಾರಿಗೂ ಹೆದರದೆ, ಪಾಪಚ್ಚಿ ಅಳುತ್ತಲೇ ಇದ್ದಳು.

ಆಗ ಅವಳ ಹಿಂದುಗಡೆ ಹತ್ತಿರ ಹತ್ತಿರ ಬೇಗನೆ ಬರುತ್ತಿದ್ದ ಹೆಜ್ಜೆ ಸಪ್ಪಳ ಕೇಳಿಸಿತು. "ನಿಲ್ಲಿಸೆ, ಮಾರಿ! ಯಾರೋ ಗಂಡಸರು ಬರುವ ಹಾಗಿದೆ" ಎಂದು ಬೈದುಕೊಂಡು ಅಳುವನ್ನು ನಿಲ್ಲಿಸಿ ಕಣ್ಣೊರಸಿಕೊಂಡು ಹಿಂದಿರುಗಿ ನೋಡಿದಳು. ಬರುತ್ತಿದ್ದದ್ದು,—ಆ ಬಿಳಿಯ ಮೊಲ. ಕರಿಯ ಅಂಗಿ, ಸರಿಗೆ ರುಮಾಲು, ಕೈಯಲ್ಲಿ ಒಂದು ಬೆಳ್ಳಿಯ ನಸ್ಯದ ಡಬ್ಬಿ, ವಸ್ತ್ರ. ಹಿಂದಿನ ವೇಷ ಕೊಂಚ ಬದಲಾಯಿಸಿದ್ದರೂ ಅದೇ ಆತುರ, ಅದೇ ಅವಸರ. "ಅಯ್ಯೋ ದೇವರೇ! ಹೊತ್ತಾಗಿಹೋಯಿತು. ಅಮ್ಮಾವರು ಹೊಡೆದು ಕೆಡವಿಬಿಡುತ್ತಾರೆ. ಅಯ್ಯೋ!" . . . . ಅದೇ ಗೊಣಗು.

ಪಾಪಚ್ಚಿಗೆ ಆಗಿನ ದುರವಸ್ಥೆಯಲ್ಲಿ ಯಾರ ಕಾಲಿಗಾದರೂ ಎರಗಿ ಅಲ್ಲಿಂದ ಪಾರಾಗಬೇಕೆನ್ನಿಸಿತು. ಆದ್ದರಿಂದ, ಮೊಲದ ಅವಸರವನ್ನು ಗಣಿಸದೆ ಅವಳು ಅದರ ಹತ್ತಿರ ಸರಿದು, "ರೀ" ಎಂದು ಕರೆದಳು. ಮೊಲಗಳ ಎದೆ ಎಷ್ಟು ಗಟ್ಟಿಯೆಂದು ನಿಮಗೆ ಗೊತ್ತಿರಬಹುದು. ಉತ್ತರ ಕುಮಾರನಿಗೆ ಎಷ್ಟು ಧೈರ್ಯ ಇತ್ತೋ ಅಷ್ಟೇ ಧೈರ್ಯ ಪ್ರತಿಯೊಂದು ಮೊಲಕ್ಕೂ ಇದೆ ಎಂದರೆ ಸುಳ್ಳಾಗಲಾರದು. ಪಾಪಚ್ಚಿ ಬಹಳ ತಾಳ್ಮೆಯಿಂದ, ಅಂಜಿಕೆಯಿಂದ, "ರೀ" ಎಂದು ಹೇಳಿದ್ದನ್ನು ಕೇಳಿದಾಗ, ಮೊಲವು ಹೆದರಿ ಸಡುಗುತ್ತಾ ನಸ್ಯದ ಡಬ್ಬಿಯನ್ನೂ ಕರವಸ್ತ್ರವನ್ನೂ ಕೆಳಗೆ ಕೆಡವಿ, "ಅಯ್ಯೋ! ಅಪ್ಪಾ!" ಎಂದುಕೊಂಡು ಓಡಿಹೋಯಿತು.

ಇನ್ನೇನು ಗತಿ? .... ಮೊಲದ ಕರವಸ್ತ್ರವನ್ನು ತೆಗೆದುಕೊಂಡು ಮುಖವನ್ನು ಒರಸಿಕೊಳ್ಳುತ್ತಾ ಎಂದಿನಂತೆ ತನಗೆ ತಾನೇ ಮಾತನಾಡಿಕೊಂಡು ಹೇಗೋ ಕಾಲವನ್ನು ನೂಕಿದಳು; ಮನಸ್ಸನ್ನು ಸಂತೈಸಲು ಪ್ರಯತ್ನಿಸಿದಳು. "ಇವತ್ತು ಹಾಸಿಗೆಯಿಂದ ಎದ್ದೊಡನೆಯೆ ನಾನು ಯಾರ ಮುಖ ಕಂಡೆ? ನಿನ್ನೆ ರಾತ್ರಿ ಮಲಗಿಕೊಳ್ಳುವ ತನಕ ನಾನು ಪಾಪಚ್ಚಿ ಆಗಿದ್ದೆ. ಆದರೆ, ಬೆಳಗಿನಿಂದ ಇನ್ನು ಯಾವ ಹುಡುಗಿಯೋ ಆಗಿಬಿಟ್ಟಿದ್ದೇನೆಂದು ತೋರುತ್ತೆ. ಯಾರಾಗಿಬಿಟ್ಟೆ? (ತನ್ನ ವಯಸ್ಸಿನ ಇತರ ಹುಡುಗಿಯರ ಹೆಸರುಗಳನ್ನೆಲ್ಲವನ್ನೂ ಒಂದೊಂದಾಗಿ ನೆನಪಿಗೆ ತಂದುಕೊಂಡು)—ನಾನು ಸರಸುವೆ? ಇರಲಾರದು. ಶಾರದಾನೇ? ಇಲ್ಲ. ಅವಳ ಹಾಗೆ ಸೊಟ್ಟಮೂತಿ ನನಗೆ ಎಲ್ಲಿದೆ? ಕಮಲುವೆ? ಥೂ. ಅವಳಿಗೆ ನನಗಿರುವ ಹಾಗೆ ಹಸುರು ರೇಷ್ಮೆಯ ಲಂಗವೇ ಇಲ್ಲ. ಇನ್ನು ಯಾರು? ಪಂಕಜಾನೆ? ಇರಬಹುದೋ ಏನೋ? ಆದರೆ, ಅವಳಿಗೆ ನನ್ನಷ್ಟು ಬೇಗ ಓದುವುದಕ್ಕೆ ಬರುವುದಿಲ್ಲ. ನಾಗುವೇ? ಪಾಪ, ಅವಳಿಗೆ ಮನೆಯಲ್ಲಿ ನಮ್ಮ ಶಾಮುವಿನ ಹಾಗೆ ಯಾರೂ ಇಲ್ಲ. ಒಬ್ಬಳೇ ಒಬ್ಬಳು ಮನೆಯಲ್ಲಿ ಯಾವಾಗಲೂ ಆಡುತ್ತಿರಬೇಕು. ಇಲ್ಲ. ನಾನು ನಾಗು ಅಲ್ಲ. ಅದೂ ಅಲ್ಲದೆ, ಅವಳು ಅವಳು, ನಾನು ನಾನು, ಅಲ್ಲವೆ? ನಾನು ಹೇಗೆ ಅವಳಾಗುವುದು? ಹಾಗಾದರೆ, ಈಗ ನಾನು ನಾನೇಯೋ? ಇನ್ನು ಯಾರೂ ಅಲ್ಲವೋ? ಥೂ. ಇದನ್ನು ಗೊತ್ತುಮಾಡುವುದು ಬಹಳ ಕಷ್ಟ! ಅಕ್ಕ

ಇಲ್ಲಿ ಇದ್ದಿದ್ದರೆ ಕೇಳಿ ತಿಳಿದುಕೊಳ್ಳಬಹುದಾಗಿತ್ತು. ಶಾಮುವನ್ನು ಕೇಳಿದರೆ ಅವನು ನಿಜ ಹೇಳದೆ ಸುಮ್ಮನೆ ಗೇಲಿಮಾಡುತ್ತಾನೆ, ಅಷ್ಟೆ. ಅಕ್ಕನೇ ಇರಬೇಕಾಯಿತು .... ಬೇಡ .... ಪರವಾ ಇಲ್ಲ. ಒಂದು ಉಪಾಯ ಇದೆ. ನನಗೆ ನಿನ್ನೆ ಸಾಯಂಕಾಲ ಬರುತ್ತಿದ್ದ ಪಾಠಗಳೆಲ್ಲವೂ ಅದೇ ರೀತಿಯಾಗಿ ಈಗ ಬಾಯಿಗೆ ಬಂದರೆ, ನಾನು ಇನ್ನೂ ಪಾಪಚ್ಚಿಯೇ ಹೌದು. ಇಲ್ಲದೆ ಇದ್ದರೆ, ನಾನು ಪಂಕಜಾ, ಅಥವಾ, ನಾಗು. 'ನೋಡೋಣ—ಒಂದು ನಾಲ್ಕು ನಾಲ್ಕು; ಎರಡು ನಾಲ್ಕು ಐದು; ಮೂರು ನಾಲ್ಕು ಸಾಕು; ಮೂರೈದು ಗಂಟು; ಮೂರೆಂಟೈದು ....' ಅಬ್ಬಬ್ಬ! ಹೀಗೆ ಇಪ್ಪತ್ತರ ಮಗ್ಗಿ ತನಕ ಹೇಳಿ ಮುಗಿಯುವುದು ಯಾವಾಗ? ಅದೂ ಅಲ್ಲದೆ ಮಗ್ಗಿಯಿಂದ ಪತ್ತೆಮಾಡಲು ಆಗುವುದಿಲ್ಲ. ಅದು ಸಾಧಾರಣ ಎಲ್ಲರಿಗೂ ಸರಿಯಾಗಿಯೇ ಬರುತ್ತೆ. ಭೂವಿವರಣೆ ಹೇಳಿ ನೋಡೋಣ....'ಬ್ರಹ್ಮಗಂಗಾ, ಗೋದಾನದಿ, ತುಂಗಕೃಷ್ಣಾ, ಸಾವೇರಿ ....' ಅಯ್ಯಯ್ಯೋ! ಒಂದೂ ಸರಿಯಾಗಿ ಬಾಯಿಗೆ ಬರುತ್ತಾ ಇಲ್ಲ. ನಾನು ಪಂಕಜಾನೇ ಆಗಿರಬೇಕು .... ಅದಿರಲಿ! .... ಪದ್ಯ? .... ಅದು ತಪ್ಪುವಹಾಗಿಲ್ಲ, ಎಷ್ಟೋಸಲ ಹೇಳಿಹೇಳಿ ರೂಢಿಯಾಗಿದೆ....

ಒಂದು ಮೂರು ಚಕ್ಕುಲಿ ಚೂರು
ಐದು ಎರಡು ಊರಿಗೆ ಹೊರಡು
ನಾಲ್ಕು ಎಂಟು ಅಜ್ಜಿಯ ಗಂಟು
ಏಳು ಆರು ಮೆಣಸಿನ ಸಾರು
ಒಂಭತ್ತು ಹತ್ತು ಭತ್ತವ ಬಿತ್ತು.

ಇದೇನಿದು? ಮೇಡಂ ಹೇಳಿಕೊಟ್ಟಿದ್ದರಲ್ಲಿ 'ಅಜ್ಜಿಯ' ಸಮಾಚಾರವೇ ಇರಲಿಲ್ಲವಲ್ಲಾ! 'ಮೆಣಸಿನ ಸಾರು' ಅನ್ನುವುದೂ ಈಗ ಹೊಸದು. ಅಯ್ಯೋ! ನಾನು ಹೇಳಿದ್ದು ಶುದ್ಧ ತಪ್ಪು. ಸರಿ! ನಾನು ನಿಜವಾಗಿಯೂ ಪಂಕಜಾ! ಇನ್ನು ನಾನು ಹೋಗಿ ಅವರ ಮನೆಯಲ್ಲಿರಬೇಕಾಗುತ್ತೆ. ಅಲ್ಲಿ ಒಂದು ನಾಯಿಯನ್ನು ಬೇರೆ ಸಾಕುತ್ತಾರೆ. ನನ್ನನ್ನು ಕಂಡರೆ ಅದು ಬಗುಳಿಕೊಂಡು ಹಾರುತ್ತೆ....ಹಾಡಿನ ಮೇಷ್ಟ್ರು ಬೇರೆ ಹಗಲೂ ರಾತ್ರಿ ಪ್ರಾಣ ತೆಗೆಯುತ್ತಾರೆ....ಇಲ್ಲ....ನಾನು ಪಂಕಜಾ ಆಗಿಬಿಟ್ಟಿದ್ದರೆ

ಖಂಡಿತ ಇಲ್ಲಿಂದ ಹೋಗುವುದೇ ಇಲ್ಲ. ಯಾರಾದರೂ ಬಂದು 'ಬಾ, ಅಮ್ಮ' ಅಂತ ಕರೆದರೆ, 'ನಾನು ಯಾರು ಹೇಳಿ, ನನ್ನ ಹೆಸರೇನು?' ಅಂತ ಕೇಳುತ್ತೇನೆ. ಅವರು ಹೇಳುವ ಹೆಸರಿನ ಹುಡುಗಿಯಾಗಿರುವುದಕ್ಕೆ ನನಗೆ ಇಷ್ಟವಿದ್ದರೆ ಎದ್ದು ಅವರ ಜೊತೆಯಲ್ಲಿ ಹೊರಡುತ್ತೇನೆ. ಇಲ್ಲದಿದ್ದರೆ ತಿರುಗಿ ಪಾಪಚ್ಚಿ ಆಗುವತನಕ ಇಲ್ಲೇ ಕುಕ್ಕರಿಸುತ್ತೇನೆ.... ಅಷ್ಟೆ! ಯಾರು ಬೇಡ ಅನ್ನುವುದಕ್ಕೆ?...... ಯಾಕೆ ಯಾರೂ ಇನ್ನೂ ಬರುವುದಿಲ್ಲ? ಇಷ್ಟು ಹೊತ್ತಿಗೆ ಅಣ್ಣ ಮನೆಗೆ ಬಂದಿರಬೇಕು. ಪಾಪಚ್ಚಿ ಎಲ್ಲಿ ಅಂತ ಕೇಳಿರಬೇಕು......ಒಬ್ಬಳೇ ಇಲ್ಲಿ ಎಷ್ಟು ಹೊತ್ತು ಕುಳಿತಿರಬೇಕೋ?'' ಹೀಗೆ, ಪಾಪಚ್ಚಿಯ ಪ್ರಲಾಪ ಬರಬರುತ್ತಾ ಹೆಚ್ಚು ಬೆಳೆಯಿತು. ಕಂಗೆಟ್ಟಂತಾಯಿತು.

ಅಳುತ್ತಿದ್ದ ಹಾಗೆಯೇ ಅವಳ ಕಣ್ಣಿಗೆ ಮೊಲದ ಬೆಳ್ಳಿ ನಸ್ಯದ ಡಬ್ಬಿ ಕಾಣಿಸಿತು. ಅದನ್ನೂ ಕೈಯಲ್ಲಿ ತೆಗೆದುಕೊಂಡಳು. ಬಹಳ ಚಿಕ್ಕ ಡಬ್ಬಿ. ಒಂದು ಬಾದಾಮಿಯಷ್ಟು ಇತ್ತೆನ್ನಬಹುದು. ಆದರೂ, ಅದು ಪಾಪಚ್ಚಿಯ ಕೈ ಹಿಡಿತಕ್ಕೆ ಸರಿಯಾಗಿತ್ತು. ''ಇದೇನು? ನನ್ನ ಕೈ ಇಷ್ಟು ಚಿಕ್ಕದಾಗಿ ಹೋಯಿತೆ?....ಓ! ನಾನು ಇನ್ನೊಂದುಸಾರಿ ಕಿರಿದಾಗುತ್ತಿದ್ದೇನೆ!'' ಎಂದು ಕೊಳ್ಳುತ್ತಾ, ತನಗೆ ಈಗ ಎಷ್ಟು ಎತ್ತರವೆಂದು ಗೊತ್ತುಮಾಡಲು ಮೇಜಿನ ಬಳಿಗೆ ಬೇಗಬೇಗನೆ ನಡೆದಳು. ಹೌದು. ಸುಮಾರು ಒಂದು ಮೊಳ, ಅಷ್ಟೆ! ಆದರೆ ಇನ್ನೂ ಕುಗ್ಗುತ್ತಲೇ ಇದ್ದಳು. ಹೀಗೆ ಕಿರಿದಾಗುತ್ತಾ, ಕುಗ್ಗುತ್ತಾ, ಕೊನೆಗೆ 'ಪಾಪಚ್ಚಿ' ಎಂಬ ಹೆಸರೂ ಕೂಡ ಉಳಿಯುವುದೋ ಇಲ್ಲವೋ ಎಂದು ಅವಳಿಗೆ ಹೆದರಿಕೆ ಹತ್ತಿತು. ಈಗ ತನ್ನ ಆಕಾರ ಚಿಕ್ಕದಾಗಲು ಕಾರಣವೇನೆಂದು ಯೋಚಿಸಿದಳು. ಯಾವುದನ್ನೂ ತಿನ್ನಲಿಲ್ಲ, ಕುಡಿಯಲಿಲ್ಲ. ತಾನು ಉಪಯೋಗಿಸುತ್ತಿದ್ದ ಮೊಲದ ಕರವಸ್ತ್ರವೇ ಕಾರಣವಿರಬಹುದೆಂದು ಊಹಿಸಿ, ಬೇಗನೆ ಅದನ್ನು ದೂರ ಬಿಸಾಡಿದಳು. ದೇವರ ದಯೆಯಿಂದ ತಗ್ಗುವುದೂ ನಿಂತಿತು.

''ಅಬ್ಬಾ! ಉಳಿದುಕೊಂಡೆ'' ಎಂದು ಸಣ್ಣ ಬಾಗಿಲಿದ್ದಲ್ಲಿಗೆ ಪುಟ್ಟ ಪುಟ್ಟ ಹೆಜ್ಜೆಗಳನ್ನಿಡುತ್ತಾ ಓಡಿದಳು. ಆದರೆ, ದಾರಿಯಲ್ಲಿ ಕಾಲು ಜಾರಿ,

ಅಲ್ಲಿದ್ದ ಒಂದು ಉಪ್ಪುನೀರಿನ ಕೆರೆಯಲ್ಲಿ ಬಿದ್ದಳು. ಪಾಪ! ಕುತ್ತಿಗೆತನಕ ನೀರು. ದಾಟಿಕೊಂಡು ದಡ ಸೇರುವುದು ತುಂಬಾ ಕಷ್ಟವಾಗಿತ್ತು. ಮೊದ ಮೊದಲು ತಾನು ಬಿದ್ದಿರುವುದು ಸಮುದ್ರದಲ್ಲಿಯೇ ಇರಬೇಕೆಂದು ಪಾಪಚ್ಚಿ ತೀರ್ಮಾನಿಸಿದಳು. "ಹಾಗಾದರೆ ನನಗೆ ಭಯವೇ ಇಲ್ಲ. ಇಲ್ಲಿ ಹತ್ತಿರವೇ ರೈಲು ಸ್ಟೇಷನ್ನಿರುತ್ತೆ. ರೈಲು ಹತ್ತಿ ಮನೆಗೆ ಹೋಗಬಹುದು" ಎಂದು ಸಮಾಧಾನಪಟ್ಟಳು. (ಏಕೆಂದರೆ, ಎರಡು ವರ್ಷಗಳ ಹಿಂದೆ ಅವಳ ಮನೆಯವರೆಲ್ಲರೂ ಸೇತು ಯಾತ್ರೆಗೆ ಹೋಗಿದ್ದರು. ಪಾಪಚ್ಚಿ ಸಮುದ್ರ ವನ್ನು ನೋಡಿದ್ದು ಆದೇ ಮೊದಲು. ಸೇತು ಸ್ನಾನವಾದ ಕೂಡಲೆ ಅವರು ರೈಲು ಹತ್ತಿ ಮನೆಯ ಕಡೆ ಹೊರಟಿದ್ದರು. ಆದ್ದರಿಂದ ಸಮುದ್ರವೆಂದರೆ, ಉಪ್ಪುನೀರು, ಜನರ ಗದ್ದಲ, ರೈಲು ಸ್ಟೇಷನ್ ಇವೆಲ್ಲಾ ಒಟ್ಟು ಸೇರಿರುವ ಜಾಗವೆಂದು ಅವಳು ತಿಳಿದುಕೊಂಡಿದ್ದಳು.) ಆದರೆ, ತಾನು ಒಂಬತ್ತಡಿ ಎತ್ತರದ ದೊಡ್ಡ ಹೆಂಗಸಾಗಿದ್ದಾಗ ಅತ್ತ ಕಣ್ಣೀರಿನ ಕೆರೆ ಅದು ಎಂದು ಪಾಪಚ್ಚಿಗೆ ಒಡನೆಯೇ ಗೊತ್ತಾಯಿತು. "ನಾನು ಇಷ್ಟು ಅಳ ಅಳಬಾರದಾಗಿತ್ತು. 'ಕಣ್ಣ ನೀರಲಿ ಮುಳುಗಿ ತೇಲಿದರಹಿತರಾಜರ ಸತಿಯರು' ಎಂದು ಶಾಮು ಓದುತ್ತಿದ್ದ. ಅದರ ಹಾಗೆ, ಈಗ ನನ್ನ ಕಣ್ಣೀರಲ್ಲಿ ನಾನೇ ಮುಳುಗುವ ಹಾಗಾಗಿದೆ. ಆಗ, ಅದು ಹೇಗೆ ಸಾಧ್ಯ ಎಂದು ಶಾಮು ಅಣ್ಣನನ್ನು ಕಾಡುತ್ತಿದ್ದ. ನಾನು ಹೋಗಿ ಅವನಿಗೆ ಇದನ್ನು ಹೇಳಿದರೂ, 'ಸುಳ್ಳು!' ಎಂದುಬಿಡುತ್ತಾನೆ, ತನಗೇ ಎಲ್ಲಾ ತಿಳಿದಿರುವ ಹಾಗೆ!" ಎಂದು ಹೇಳಿಕೊಳ್ಳುತ್ತಾ ಪಾಪಚ್ಚಿ ಆ ಕೆರೆಯ ಅಂಚಿನವರೆಗೂ ಬಂದಳು.

ಆಗ ಅದೇ ಕೆರೆಯಲ್ಲಿ ಕೊಂಚ ದೂರದಲ್ಲೇ ಯಾರೋ ಕೈಕಾಲು ಬಡಿಯುವ ಸದ್ದಾಯಿತು. ಒಂದು ಬಿಳಿಯ ಕರಡಿಯ ಹಾಗೆ ಕಾಣಿಸಿತು. ಪಾಪಚ್ಚಿಗೆ ದಿಗಿಲಾಯಿತು. ಆದರೆ, ತಾನು ಗೇಣುದ್ದದ ಪುಟ್ಟ ಹುಡುಗಿ ಎಂದು ಜ್ಞಾಪಿಸಿಕೊಂಡ ಮೇಲೆ, "ಅದೊಂದು ಬಿಳಿಯ ಇಲಿ. ತನ್ನ ಹಾಗೆ ಅದೂ ನೀರಿನಲ್ಲಿ ಬಿದ್ದು ಒದ್ದಾಡುತ್ತಿದೆ, ಅಷ್ಟೆ" ಎಂದು ಕಂಡು ಕೊಂಡಳು. ಇಲಿಯನ್ನು ಕಂಡು ಅಷ್ಟು ಹೆದರಿದ್ದಕ್ಕಾಗಿ ಕೊಂಚ ನಾಚಿಕೊಂಡಳು.

"ಇಲ್ಲಿ ಎಲ್ಲವೂ ವಿಪರೀತವಾಗಿದೆ. ಇದು ಯಾವುದೋ ಒಂದು ಮಾಯದ ಊರು. ಈ ಇಲಿ ನನ್ನೊಂದಿಗೆ ಮಾತನಾಡಿದರೂ ಆಡಬಹುದು. ಅಂತು, ಆಡಿಸಿನೋಡುತ್ತೇನೆ" ಎಂದು, ಪಾಪಚ್ಚಿ, "ರೀ, ಇಲಿಯೇ"



ಎಂದು ಕೂಗಿದಳು. (ಇಲಿಗಳೊಂದಿಗೆ ಮಾತು ಪ್ರಾರಂಭಿಸಲು ಸರಿಯಾದ ಕ್ರಮ ಯಾವುದೆಂದು ಪಾಪಚ್ಚಿಗೆ ಮಾತ್ರವಲ್ಲ, ಅನೇಕ ದೊಡ್ಡ ವಿದ್ವಾಂಸರಿಗೆ ಕೂಡ ತಿಳಿಯದು. ಆದರೂ, ಧೈರ್ಯವಾಗಿ ಪಾಪಚ್ಚಿ ಮಾತು ಕಥೆ ಪ್ರಾರಂಭಿಸಿಯೇ ಬಿಟ್ಟಳು. ಶಾಮುವಿನ ಹತ್ತಿರವಿದ್ದ ವ್ಯಾಕರಣ ಪುಸ್ತಕದಲ್ಲಿ,

| | |
|---|---|
| ಇಲಿ | ಇಲಿಗಳು |
| ಇಲಿಯೇ | ಇಲಿಗಳೇ |
| ಇಲಿಯನ್ನು | ಇಲಿಗಳನ್ನು |
| .... | .... |

ಎಂದು ಬರೆದಿದ್ದ ರೀತಿಯನ್ನು ಅವಳು ಬಲ್ಲಳು. ಆದ್ದರಿಂದ, "ರೀ, ಇಲಿಯೇ!" ಎಂದು ಸಂಬೋಧಿಸಿದಳು.) ಇಲಿ ಬಾಯಿತೆರೆಯಲೇ ಇಲ್ಲ. ಎಲ್ಲಿ ಗಂಟಲೊಳಕ್ಕೆ ಉಪ್ಪುನೀರು ಹೋಗುತ್ತದೆಯೋ ಎಂಬ ಭಯವೋ,

ಏನೋ? ತೆಪ್ಪಗಿತ್ತು. "ಓಹೊ! ಇದಕ್ಕೆ ನಮ್ಮ ಭಾಷೆ ಬರುವುದಿಲ್ಲವೆಂದು ಕಾಣುತ್ತೆ. ಬಣ್ಣಾ ನೋಡಿ ನಾನು ಆಗಲೇ ತಿಳಿದುಕೊಳ್ಳಬೇಕಾಗಿತ್ತು. ಇದು ಈರೋಪಿಯನ್ ಇರಬೇಕು. ಅದಕ್ಕೇನು? ಇಂಗ್ಲೀಷಿನಲ್ಲೇ ಒಂದೆರಡು ಮಾತು ಆಡಿದರಾಯಿತು...." ಎಂದು ಹೇಳುತ್ತಾ, ಪಾಪಚ್ಚಿ, "ಎ ರ್‍ಯಾಟ್, ಒಂದು ಇಲಿ; ಎ ಕ್ಯಾಟ್, ಒಂದು ಬೆಕ್ಕು, ಸರಿಯೇ ಸಾರ್?" ಎಂದು ಕೇಳಿದಳು.

ಇಲಿ, ಪಾಪ, ನೀರಿನೊಳಕ್ಕೆ 'ಘುಳುಂ' ಎಂದು ಮುಳುಗಿ, ಕೊಂಚ ಹೊತ್ತಿನ ಮೇಲೆ ಉಸಿರನ್ನು ಕಟ್ಟಲಾರದೆ ಪಿಟಪಿಟನೆ ಕಣ್ಣುಬಿಡುತ್ತಾ ಮೇಲಕ್ಕೆ ಬಂದಿತು. ಪಾಪಚ್ಚಿಗೆ ತುಂಬಾ ವ್ಯಥೆಯಾಯಿತು. ಅನ್ಯಾಯವಾಗಿ ಈ ಪ್ರಾಣಿಯನ್ನು ಹೆದರಿಸಿದೆನಲ್ಲಾ, ಎಂದು ಕೊರಗಿದಳು. "ತಪ್ಪಾಯಿತು. ನಿಮ್ಮಗಳಿಗೆ ಬೆಕ್ಕನ್ನು ಕಂಡರೆ ಆಗುವುದಿಲ್ಲವೆಂದು ನಾನು ಮರೆತೇಹೋದೆ" ಎಂದು ಬಹಳವಾಗಿ ಬೇಡಿಕೊಂಡಳು. "ಕಂಡರೆ ಆಗುವುದಿಲ್ಲವಂತೆ! ನೀವೂ ಒಂದು ಇಲಿ ಆಗಿದ್ದರೆ ನಿಮಗೂ ಅದನ್ನು ಕಂಡರೆ ಆಗುತ್ತಿರಲಿಲ್ಲ. ನಿಮಗೂ ಪ್ರಾಣಕ್ಕೆ ಬರುತ್ತಿತ್ತು" ಎಂದು ಇಲಿ ಕೋಪದಿಂದ ಕಿರಲಿತು. "ಅದಿರಲಿ. ಹಾಗೆ ರೇಗಬೇಡಿ. ಕೋಪದಿಂದ ಬಾಲವನ್ನು ಹಾಗೆ ನೆಟ್ಟಗೆ ನಿಲ್ಲಿಸಬೇಡಿ. ಕೊಂಚ ಸಡಿಲ ಬಿಡಿ....ಹಾಗೆ....ಆದರೂ ನಮ್ಮ ಮನೆ ಪಿಲ್ಲಿಯನ್ನು ಒಂದುಸಲ ನೋಡಿದರೆ, ನೀವು ಏನನ್ನುತ್ತೀರೋ? ಅವಳನ್ನು ಕಂಡರೆ ಬೆಕ್ಕುಗಳ ಮೇಲಿರುವ ದ್ವೇಷವೆಲ್ಲವೂ ತೀರ ಮಾಯವಾಗುವುದು. ಎಂತಹ ಮುದ್ದಾದ ಬೆಕ್ಕಿನಮರಿ, ಗೊತ್ತೆ? ಕಣ್ಣು ಮುಚ್ಚಿಕೊಂಡು ಒಲೆಯ ಮುಂದೆ ಹಾಲುಕಾಯಿಸುವುದನ್ನೇ ನೋಡುತ್ತಾ ಕುಳಿತಿರುತ್ತಾಳೆ. ಬಾಲಮಾತ್ರ ಆಚೆ, ಈಚೆ, ಎಡಕ್ಕೆ, ಬಲಕ್ಕೆ ನೆಗೆಯುತ್ತಾ ಇರುತ್ತದೆ. .... ಇಲಿಗಳೇನಾದರೂ .... (ಘುಳುಂ ಎಂಬ ಸದ್ದು) .... ಓ, ಮರೆತೆ....(ಇಲಿ ಮೇಲಕ್ಕೆ ಬಂತು) ನಿಮಗೆ ರುಚಿಸದಿದ್ದರೆ ಬೆಕ್ಕಿನ ವಿಚಾರವನ್ನೇ ನಾವು ಬಿಟ್ಟುಬಿಡೋಣ" ಎಂದು ಪಾಪಚ್ಚಿ ಹೇಳಿದಳು. "ಏನು ಹೇಳಿದಿರಿ? **ನಾವು** ಬಿಟ್ಟುಬಿಡೋಣ, ಅಂದೆರಾ? **ನಾವು?** ನಾನು ಏನಾದರೂ ಈ ವಿಷಯ ಈಗ ಎತ್ತಿದೆನೇ? ಬೆಕ್ಕುಗಳು—ನೀಚರು,

ಚಂಡಾಳರು, ನಮ್ಮ ತಾತ ಮುತ್ತಾತಂದಿರ ಕಾಲದಿಂದಲೂ ನಾವು ಆ ರಾಕ್ಷಸರ ಜೊತೆ ಸೇರುವುದೇ ಇಲ್ಲ. ಕೊಳ್ಳುವುದು ಕೊಡುವುದು, ತಿಂಡಿ ತೀರ್ಥ, ಊಟ ಉಪಚಾರ ಎಲ್ಲವನ್ನೂ ಬಿಟ್ಟಿದ್ದೇವೆ. . . . ಶುದ್ಧ ಅಯೋಗ್ಯರು, ಪುಂಡರು . . . . ಪಾಪಿಗಳು '' ಎಂದು ಮುಂತಾಗಿ ಇಲಿ ಶಪಿಸಲು ಪ್ರಾರಂಭಿಸಿತು. '' ಇಲ್ಲ, ಇಲ್ಲ, ಆ ಮಾತನ್ನಲ್ಲಿಗೆ ಬಿಟ್ಟೆ! ಕ್ಷಮಿಸಿ. . . . ಹೋಗಲಿ. . . . . ನಿಮಗೆ ನಾಯಿಗಳು ಸ್ನೇಹಿತರು ತಾನೆ? ಅವರ ವಿಷಯ ಹೇಳಬಹುದು ತಾನೆ? (ಇಲಿ ಸುಮ್ಮನಿದ್ದುದರಿಂದ ಕೊಂಚ ಉತ್ಸಾಹದೊಡನೆ) ನಮ್ಮ ಬೀದಿಯಲ್ಲಿ ಒಂದು ಜೂಲುನಾಯಿ ಇದೆ. ಮೂಗಿನ ತುದಿ ಬಾಲದ ತುದಿ ಮಾತ್ರ ಕಪ್ಪು. ಉಳಿದ ಕಡೆಯೆಲ್ಲಾ ಬಿಳುಪು. ಮೈ ತುಂಬಾ ಸುರುಳಿಸುರುಳಿಯಾಗಿದೆ ಕೂದಲು. ಚೆಂಡು ಗಿಂಡು ಎಸೆದರೆ ಓಡಿಹೋಗಿ ನಮ್ಮ ಕೈಗೇ ತಂದುಕೊಡುತ್ತದೆ. ಸಾವಿರ ರೂಪಾಯಿ ಕೊಟ್ಟರೂ ಅಂತಹ ನಾಯಿ ಸಿಗುವುದಿಲ್ಲ ಎಂದು ಅವರ ಮನೆಯವರು ಹೇಳುತ್ತಾರೆ. ಒಂದು ದಿವಸ ಒಂದು ತಮಾಷೆ ಆಯಿತು. ಒಂದು ಇಲಿ ಬಂತಂತೆ. ಆಗ ಅದು ಓಡಿಹೋಗಿ ಅದನ್ನ 'ಗಬಕ್' ಎಂದು (ಮತ್ತೆ 'ಘುಳುಂ' ಎಂಬ ಸದ್ದು!). . . . ಅಯ್ಯೋ! ನಾನು ಇದನ್ನೂ ಹೇಳಬಾರದಾಗಿತ್ತು. ಎಷ್ಟು ಬೆದರಿಕೊಂಡಿತೋ, ಪಾಪ ಇನ್ನೂ ಮೇಲಕ್ಕೆ ಬರಲೇ ಇಲ್ಲವಲ್ಲಾ! ಅಗೋ ಬಂತು '' ಎಂದು ಹೇಳುತ್ತಾ, ಅತ್ತ ಕಡೆ ತಿರುಗಿನೋಡಿದಳು. ಇಲಿ ಬೇಗ ಬೇಗ ಈಜುತ್ತಾ ದೂರ ಸರಿಯುತ್ತಿತ್ತು. ಪಾಪಚ್ಚಿ ಅದರ ಹಿಂದೆ ಹೋಗಿ ಸಮಾಧಾನಪಡಿಸಿದಳು. ಅದರ ಪ್ರೀತಿ ವಿಶ್ವಾಸಗಳನ್ನು ಮತ್ತೆ ಸಂಪಾದಿಸಿದಳು. ಆಗ ಇಲಿ ಗದ್ಗದ ಸ್ವರದಲ್ಲಿ '' ದಡ ಸೇರಿದ ಮೇಲೆ ಒಂದು ಕಥೆ ಹೇಳುತ್ತೇನೆ. ಆಗ, ನಮಗೂ ನಾಯಿ ಬೆಕ್ಕುಗಳಿಗೂ ಇರುವ ದ್ವೇಷದ ಕಾರಣ ಏನೆಂದು ನಿಮಗೆ ತಿಳಿಯುತ್ತೆ '' ಎಂದು ಹೇಳಿತು.

ಆ ಕೆರೆಯಲ್ಲಿ ಇನ್ನೂ ಅನೇಕರು ಕೈಕಾಲು ಬಡಿದುಕೊಳ್ಳುವ ಸದ್ದಾಯಿತು. ಪಾಪಚ್ಚಿ ಒಂದುಸಲ ಕೆರೆಯ ಸುತ್ತ ನೋಡಿದಳು. ಆಶ್ಚರ್ಯ! ಆಗಲೇ ಹತ್ತಿಪ್ಪತ್ತು ಪ್ರಾಣಿಗಳು ಕೆರೆಯಲ್ಲಿ ಜಾರಿಬಿದ್ದು ದಿಕ್ಕುತೋಚದೆ ಈಜಾಡುತ್ತಿದ್ದುವು. . . . ಹೆಂಟೇಗೊದ್ದ, ಗಿಳಿ, ಹದ್ದಿನ

ಮರಿ, ಕಾಜಾಣ, ಅಳಿಲು, ಹಾವುರಾಣಿ, ಜಿರಲೆ, ಪಾರಿವಾಳ, ಕೋಳಿ, ಗೂಬೆ.... ಹೀಗೆ ಯಾಯಯಾವುವೋ ಪ್ರಾಣಿಗಳು. ಇಷ್ಟೊಂದು ಪ್ರಾಣಿಗಳು ಅಲ್ಲಿ ಹೇಗೆ ಬಂದು ಬಿದ್ದುವೋ ದೇವರೇ ಬಲ್ಲ. ಕಡೆಗೆ ಎಲ್ಲವೂ, ಪಾಪಚ್ಚಿಯು ಹಿಂದೆಯೇ ದಡ ಸೇರಿ ನೆಲದ ಮೇಲೆ ಬಂದು ಕುಳಿತುವು.

---

## ರೈಲೋಟ

ಕೆರೆಯ ದಡದಲ್ಲಿ ಅರ್ಧವೃತ್ತಾಕಾರವಾಗಿ ಕುಳಿತಿದ್ದ ಆ ಪ್ರಾಣಿ ಪರಿಷತ್ತು ನೋಡುವುದಕ್ಕೆ ಬಹು ವಿಚಿತ್ರವಾಗಿತ್ತು. ಅದನ್ನು ಕಂಡರೆ ಎಂಥ ಅಳುಮುಖದವನಾದರೂ ನಗದಿರಲಾರ. ಎಲ್ಲಾ ಹಕ್ಕಿಗಳಿಗೂ ರೆಕ್ಕೆಗಳು ಮೈಗೆ ಅಂಟಿಕೊಂಡಿದ್ದುವು. ಅಳಿಲು, ಇಲಿ ಮುಂತಾದವು ಚಳಿಯಿಂದ ನಡುಗುತ್ತಿದ್ದುವು. ಕೆಲವು ಗಟ್ಟಿಯಾಗಿ ಕೆಮ್ಮುತ್ತಿದ್ದುವು. ಎಲ್ಲಕ್ಕೂ ಒದ್ದೆ, ಚಳಿ, ನಡುಕ. ಹೀಗೆಯೇ ಕೊಂಚ ಹೊತ್ತು ಅವು ನೀರು ತೊಟಕಿಸುತ್ತಾ ಕುಳಿತಿದ್ದರೆ, ಕೆಲವಕ್ಕೆ ನ್ಯೂಮೋನಿಯಾ ಜ್ವರ ಬರುವುದರಲ್ಲಿ ಸಂದೇಹವೇ ಇರಲಿಲ್ಲ.

ಅಲ್ಲಿ, ಆಗ, ಎಲ್ಲರಿಗೂ ಬೇಕಾಗಿದ್ದದ್ದು ಒಂದೇ—ಮೈ ಒರಸಿಕೊಳ್ಳುವುದಕ್ಕೆ ಒಣಗಿದ ಟವಲುಗಳು. ಆದರೆ, ಅವುಗಳನ್ನು ಎಲ್ಲಿಂದ ಒದಗಿಸುವುದು? ಯಾರು ತಂದುಕೊಡುವರು? ಒದ್ದೆ ಆರಲು ಇನ್ನೇನು ಉಪಾಯ, ಎಂದು ಎಲ್ಲರೂ ಎಲ್ಲರನ್ನೂ ಕೇಳುತ್ತಿದ್ದರು. ಪಾಪಚ್ಚಿಯೂ ಇತರ ಪ್ರಾಣಿಗಳೊಡನೆ ಬಹಳ ಸಲಿಗೆಯಿಂದ ಸಂಭಾಷಿಸತೊಡಗಿದಳು. ಸಲಿಗೆಯ ಮಾತು ಹಾಗಿರಲಿ; ಮಾತು ಬೆಳೆಯುತ್ತಾ ಬೆಳೆಯುತ್ತಾ ಅವಳಿಗೂ ಕೋಳಿಗೂ ಒಂದು ಸಣ್ಣ ಜಗಳವೇ ಪ್ರಾರಂಭವಾಗಿಹೋಯಿತು. ಕೊನೆಗೆ ಕೋಳಿ, "ನಿನಗಿಂತ ನನಗೆ ವಯಸ್ಸಾಗಿದೆ. ಎಷ್ಟಾದರೂ ನಾನು ಹಿರಿಯವಳು. ಚಿಕ್ಕವರು ದೊಡ್ಡವರ ಮೇಲೆ ಬಿದ್ದು ಮಾತನಾಡಕೂಡದು"

ಎಂದಿತು. ಪಾಪಚ್ಚಿಗೆ ಕೋಪ ಬಂತು. ಆದರೂ ಮೊದಲು ಕೋಳಿಯ ವಯಸ್ಸೇನೆಂದು ತಿಳಿದುಕೊಳ್ಳಬೇಕೆಂದು ಯೋಚಿಸಿ, ಅವಳು ಕೋಳಿಯನ್ನು ಅನೇಕಸಲ ಕೇಳಿದಳು. ಆ ಕೋಳಿಯ ಹಠ ನೋಡಿ! ತಾನು ಹುಟ್ಟಿ ಎಷ್ಟು ವರ್ಷವಾಯಿತೆಂಬ ಗುಟ್ಟನ್ನು ಅದು ಕಡೆಗೂ ಬಿಚ್ಚಲೇ ಇಲ್ಲ. ಆದ್ದರಿಂದ, ಜಗಳ ಅಲ್ಲಿಗೇ ಕೊನೆಗಂಡಿತು.

ಬಿಳಿಯ ಇಲಿ ಒಳ್ಳೆಯ ಸುಟಿಯಾದ ಪ್ರಾಣಿ. ಬುದ್ಧಿವಂತ. ನಾಲ್ಕು ಜನರು ತೊಂದರೆಗೆ ಗುರಿಯಾದರೆ ನೋಡಿಕೊಂಡು ಸುಮ್ಮ ನಿರಲಾರ. ಸೇವಾತತ್ಪರ. ಎಲ್ಲರೂ ಒದ್ದೆಯನ್ನು ಆರಿಸಿಕೊಳ್ಳಲು ಅದು ಒಂದು ಉಪಾಯ ಹುಡುಕಿತು. ಎಲ್ಲರನ್ನೂ ತನ್ನ ಸುತ್ತ ಬರಮಾಡಿ ಕೂರಿಸಿಕೊಂಡಿತು. "ನಾನು ಹೇಳುವುದನ್ನು ಸಾವಧಾನವಾಗಿ ಲಾಲಿಸಿ. ನಿಮ್ಮ ಒದ್ದೆ ಬೇಗನೆ ಆರುವ ಹಾಗೆ ನಾನು ಮಾಡುತ್ತೇನೆ. ನನ್ನ ಮಾತುಗಳು ಒಂದರಹಿಂದೊಂದು ಕಿವಿಯೊಳಕ್ಕಿಳಿದ ಹಾಗೆಲ್ಲಾ ನಿಮ್ಮ ಮೈ ಒದ್ದೆ ಆರಿಹೋಗುತ್ತೆ, ನೋಡುತ್ತಿರಿ" ಎಂದು ಇಲಿ ಕಿರಿಚಿತು. ಎಲ್ಲರೂ ಬೆಪ್ಪಾದರು. ಇಲಿಯ ಉಪಾಯವೇನಿರಬಹುದೆಂದು ಎಲ್ಲರೂ ಕುತೂಹಲ ದಿಂದ ಇದಿರುನೋಡಿದರು.

ಸಂಗೀತಗಾರರಂತೆ ಇಲಿಯೂ ತನ್ನ ಗಂಟಲನ್ನು ಸರಿಪಡಿಸಿಕೊಂಡು, "ಎಲ್ಲರೂ ಸಿದ್ಧವಾಗಿದ್ದೀರೋ? ಹಾಗಾದರೆ ಕೇಳಿ" ಎಂದು ಪ್ರಾರಂಭಿಸಿತು. "ಕೊಂಚ ಒಣವೇದಾಂತ ಹೇಳುತ್ತೇನೆ. ಅದನ್ನು ಕೇಳುತ್ತ ಕುಳಿತರೆ ನಿಮ್ಮ ರೆಕ್ಕೆಗಳೂ ಒಣಗುತ್ತವೆ. ದಯವಿಟ್ಟು ಯಾರೂ ನಡುವೆ ಮಾತನಾಡಬೇಡಿ....'ಚೇತನಾಚೇತನಾತ್ಮಕವಾದ ಪಂಚಭೂತ ಗಳಿಂದ ಸೃಷ್ಟಿಸಲ್ಪಟ್ಟಿರುವ ಈ ಪ್ರಪಂಚಕ್ಕೆ ಚೈತನ್ಯಸ್ವರೂಪನಾದ ಪರಮಾತ್ಮನೇ ಮೂಲಾಧಾರನು. ಚೈತನ್ಯವೆಂಬುದು ಅನಾದಿ ನಿತ್ಯ, ಸ್ವಯಂಜ್ಯೋತಿ, ಮತ್ತು ಅಖಂಡ. ಅದರಲ್ಲಿ ಜ್ಞಾನಜ್ಞೇಯಾತ್ಮಕವಾದ ಪ್ರಪಂಚವು....'ಇರಲಿ! ಇದಕ್ಕಿಂತ ಶುಷ್ಕವಾದದ್ದು ಇನ್ನೊಂದು ಈಗ ನೆನಪಿಗೆ ಬಂತು. ಅದನ್ನು ಕೇಳಿದರೆ ನಮ್ಮ ಕಾರ್ಯವು ಬೇಗ ಕೈಗೂಡುವುದು....ಸದ್ದುಮಾಡಬೇಡಿರಿ. 'ನಮ್ಮ ದೇಶವು ಉತ್ತರ ಅಕ್ಷಾಂಶ ಹನ್ನೆರಡರಿಂದ ಹದಿನೈದು ಡಿಗ್ರಿಗಳವರೆಗೂ ಪ್ರಸರಿಸಿದೆ. ಸಮು

ಭಾಜಕ ವೃತ್ತ...ಕ್ಕ ಸಂಕ್ರಾಂತಿ ವೃತ್ತಕ್ಕೂ ಮಧ್ಯೆ ಇರುವ ಪ್ರದೇಶಗಳಲ್ಲಿ ಅಹೋರಾತ್ರಿಗಳ ವ್ಯತ್ಯಾಸ ಕಡಮೆ. ಮೇಷ ಸಂಕ್ರಮಣ ಕಾಲದಲ್ಲಿ ಸಮಭಾಜಕ ವೃತ್ತದಲ್ಲಿ ಸೂರ್ಯನು ನೆಟ್ಟಗೆ ನೆತ್ತಿಯ ಮೇಲೆ ಕಾಣುವ ನಷ್ಟೆ! ಆಗ ನಮ್ಮ ಸೀಮೆಯಲ್ಲಿ ಕೊಂಚ ಓರೆಯಾಗಿ ದಕ್ಷಿಣಕ್ಕೆ ಕಾಣು ವನು. ಮುಂದೆ....'"

ಆಗ, ಗಿಳಿ ಬೇಸರಿಕೆಯಿಂದ ಆಕಳಿಸುತ್ತಾ "ಸಾಕಪ್ಪಾ, ಸಾಕು!" ಎಂದು ಹೇಳಿತು. ಇಲಿಗೆ ಕೋಪ ಬಂತು. ಆದರೂ ಜಾಣತನದಿಂದ ಗಿಳಿ ಹೇಳಿದ್ದನ್ನು ಕೇಳದೆ ಇದ್ದ ಹಾಗೆ ನಟಿಸಿ "ಯಾರೋ ಮಾತನಾಡಿದ ಹಾಗಿತ್ತು. ನೀವೋ?" ಎಂದು ಗಿಳಿಯ ಕಡೆ ತಿರುಗಿತು. ಎಲ್ಲರೂ ಆ ಕಡೆಗೆ ತಿರುಗಿದರು. ಗಿಳಿಯ ಮುಖ ಚಿಕ್ಕದಾಯಿತು. ಆದರೂ, "ನಾನಲ್ಲ, ಸಾರ್!" ಎಂದು ಸುಳ್ಳುಹೊಡೆಯಿತು. "ಅಲ್ಲವೋ? ಕ್ಷಮಿಸಿ '....ಮುಂದೆ ದಿನೇ ದಿನೇ ಸೂರ್ಯನು ಉಚ್ಚನಾಗುತ್ತಾ, ಜೂನ್ ಇಪ್ಪತ್ತೊಂದರಲ್ಲಿ, ಅಂದರೆ, ಕರ್ಕಾಟಕ ಸಂಕ್ರಮಣದಲ್ಲಿ ಅಹಸ್ಸು ಪರಮಾವಧಿಯನ್ನು ಹೊಂದುವುದು.'" ಪ್ರಾಣಿಗಳಿಗೆಲ್ಲಾ ಪೂರಾ ಬೇಜಾರು, ಕೋಪ. "ನಮ್ಮ ಶಾಂತತೆಯೂ ಪರಮಾವಧಿಯನ್ನು ಹೊಂದಿಬಿಟ್ಟಿದೆ" ಎಂದು ಕೋಳಿ ಕೂಗಿಯೇಬಿಟ್ಟಿತು.

"ಹಾಗಾದರೆ ನಾನೊಂದು ಉಪಾಯ ಹೇಳುತ್ತೇನೆ. ಮಾತಿ ನಿಂದ ಮೈ ಒದ್ದೆ ಹೋಗುವುದೇ ಇಲ್ಲ...." ಎಂದು ಹೆಂಟೇಗೊದ್ದ ಮುಖವನ್ನು ಕೆಂಪಗೆ ಮಾಡಿಕೊಳ್ಳುತ್ತಾ ಹೇಳಿತು. "ಏನದು, ಹೇಳಿ, ಮಾಡೋಣ" ಎಂದು ಎಲ್ಲರೂ ಏಕ ಕಂಠವಾಗಿ ಕೇಳಿಕೊಂಡರು. ಅದಕ್ಕೆ ಅದು, "ಅದರ ಹೆಸರು 'ರೈಲೋಟ'" ಎಂದು ಹೇಳಿ ಸುಮ್ಮನಾಯಿತು. "ಹಾಗೆಂದರೇನು?" ಎಂದು ಯಾರಾದರೂ ಕೇಳಲಿ, ಕೇಳಿದ ಮೇಲೆ ವಿವರಿಸಿದರಾಯಿತು, ಈಗಲೇ ಏಕೆ ಹೇಳಬೇಕು, ಎಂದು ಅದರ ಜಂಬ. ಅದಕ್ಕೆ ತಕ್ಕ ಶಾಸ್ತಿಯಾಗಲೆಂದು ಎಲ್ಲರೂ ಕೊಂಚ ಹೊತ್ತು ಸುಮ್ಮ ನಿದ್ದರು. ಯಾರೂ ಕೇಳದಿದ್ದರೆ ಏನು ಗತಿ, ಎಂದು ಹೆಂಟೇಗೊದ್ದಕ್ಕೆ ದಿಗಿಲು ಹತ್ತಿತು. ಎಲ್ಲರೂ ಒಬ್ಬರ ಮುಖವನ್ನೊಬ್ಬರು ನೋಡುತ್ತಾ ನಗುತ್ತಿದ್ದರು. ಕಡೆಗೆ, ಪಾಪಚ್ಚಿಗೆ ಅದರ ಅವಸ್ಥೆಯನ್ನು ಕಂಡು ಕನಿಕರವಾಯಿತು

"'ರೈಲೋಟ' ಅಂದರೆ ಏನು?" ಎಂದು ಅವಳು ಗಂಭೀರಸ್ವರದಲ್ಲಿ ಕೇಳಿದಳು.

ಹೆಂಟೇಗೊದ್ದ ತಕ್ಷಣವೇ ಎದ್ದು, "ವಿವರಿಸುವುದಕ್ಕಿಂತ ಓಡಿಸಿಯೇ ತೋರಿಸುತ್ತೇನೆ. ಬನ್ನಿ" ಎಂದು ಹೇಳಿತು. ಮೊದಲು ತನ್ನ ಬಾಲದಿಂದ ಸುಮಾರು ಚಕ್ರಾಕಾರದಲ್ಲಿ ಒಂದು ಗೆರೆಯನ್ನೆಳೆಯಿತು. ಅನಂತರ, ಎಲ್ಲರನ್ನೂ ಕರೆದುತಂದು ಆ ಗೆರೆಯ ಮೇಲೆ ಅಲ್ಲಲ್ಲಿ ಕೊಂಚ ದೂರದೂರವಾಗಿ ನಿಲ್ಲಿಸಿತು. ರೈಲೋಟದಲ್ಲಿ "ವನ್, ಟೂ, ತ್ರೀ, ಆಫ್" ಯಾವುದೂ ಇಲ್ಲವೆಂದೂ, ಬೇಕು ಬೇಕಾದವರು ಬೇಕು ಬೇಕಾದ ಕಡೆ, ಗೆರೆಯ ಮೇಲೋ, ಗೆರೆಯ ಒಳಗೋ, ಹೊರಗೋ, ಹೇಗೋ ಓಡುವುದು. ಕಾಲು ಸೋತು ಸುಸ್ತಾಗಿ ಕೆಳಗೆ ಬೀಳುವತನಕ ಓಡಬಹುದೆಂದೂ ಹೇಳಿತು. ಎಲ್ಲರೂ ಓಡಿದರು. ಅಂತು ಇಂತು, ಹೀಗೆ ಅರ್ಧಗಂಟೆ ಓಡಿದ ಮೇಲೆ ಎಲ್ಲರ ಮೈಯೂ ಆರಿತು. ಕೆಲವರಿಗೆ ಸೆಕೆಯಿಂದ ಬೆವರುವುದಕ್ಕೂ ಪ್ರಾರಂಭ!

"ಓಟ ಮುಗಿಯಿತು" ಎಂದು ಹೆಂಟೇಗೊದ್ದ ಕೂಗಿತು. ಎಲ್ಲರೂ ಅದರ ಸುತ್ತ ಕುಳಿತು ಸುದಾರಿಸಿಕೊಳ್ಳುತ್ತಿದ್ದರು. ಕೆಲವರು, "ರೈಲೋಟದಲ್ಲಿ ಗೆದ್ದವರು ಯಾರು?" ಎಂದು ಕೇಳಿದರು. ಈ ಪ್ರಶ್ನೆಗೆ ಉತ್ತರ ಹೇಳುವುದು ಕೊಂಚ ಕಷ್ಟವಾಗಿತ್ತು. ಪಾಪ! ಹೆಂಟೇಗೊದ್ದ ಏನು ಹೇಳುವುದಕ್ಕೂ ತೋಚದೆ ಆಲೋಚನೆಯಲ್ಲಿಯೇ ಮುಳುಗಿತ್ತು. ಅದರ ಮುಖದ ಬಣ್ಣ ಕೊಂಚ ಕೊಂಚವಾಗಿ ಬದಲಾಯಿಸುತ್ತಾ ಕೊನೆಗೆ ರಕ್ತದಂತೆ ಕೆಂಪಾಯಿತು. ಕಡೆಗೆ "ಎಲ್ಲರೂ ಗೆದ್ದರು. ಎಲ್ಲರಿಗೂ ಪಾರಿತೋಷಿಕವನ್ನು ಕೊಡಲಾಗುವುದು" ಎಂದು ಹೇಳಿತು. ಪ್ರಾಣಿಗಳಿಗೆ ಹಿಡಿಯಲಾರದ ಸಂತೋಷ. ಜಯಘೋಷ. ಅವಾಂತರವೋ ಅವಾಂತರ. ಎಲ್ಲವೂ ಆನಂದದಿಂದ ಕುಣಿದಾಡಿದುವು.

"ಬಹುಮಾನವನ್ನು ದಯಪಾಲಿಸುವವರು ಯಾರು?" ಎಂದು ಕೆಲವರು ಕೇಳಿದರು. "ಅವಳು" ಎಂದು ಹೆಂಟೇಗೊದ್ದ ಪಾಪಚ್ಚಿಯ ಕಡೆ ಬಾಲವನ್ನು ತೋರಿಸಿತು. ಸರಿ! ಎಲ್ಲರೂ ಪಾಪಚ್ಚಿಯನ್ನು

"ಬಹುಮಾನ, ಬಹುಮಾನ" ಎಂದು ಬೇಡಿದರು. ಪಾಪ! ಅವಳು ಏನು ಮಾಡಿಯಾಳು? ಅತ್ತರೆ ಯಾರೂ ಬಿಡುವ ಹಾಗಿಲ್ಲ, ಏನು ಕೊಡುವುದೆಂದು ಶಾಮುವನ್ನಾದರೂ ಕೇಳಿ ತಿಳಿದುಕೊಳ್ಳುವ ಹಾಗಿರಲಿಲ್ಲ. ಜೇಬಿನಲ್ಲಿ ಕೈಯಿಟ್ಟು ಏನಾದರೂ ಇದೆಯೇ ಎಂದು ನೋಡಿದಳು. ಆಗ, ಬೆಳಗ್ಗೆ, ಪಕ್ಕದ ಮನೆ 'ಶಾರದಾ ಕೊಟ್ಟಿದ್ದ ಕಡಲೆಕಾಯಿ ಐದಾರು ಜೇಬಿನಲ್ಲಿರು ವುದು ಅವಳಿಗೆ ಪತ್ತೆಯಾಯಿತು. ಸಿಪ್ಪೆ ಸುಲಿದು ಒಂದೊಂದು ಬೀಜವನ್ನು ಒಬ್ಬೊಬ್ಬರಿಗೆ ಕೊಟ್ಟಳು. ದೇವರ ದಯೆಯಿಂದ ಕಡಲೆಕಾಯಿ ಕಣ್ಣೀರಲ್ಲಿ ಅಷ್ಟು ನೆನೆದಿರಲಿಲ್ಲ. ಎಲ್ಲರಿಗೂ ಒಂದೊಂದು ಬೀಜದಂತೆ ಸರಿಯಾಗಿ ಹಂಚಿದಳು. ಅಲ್ಲಿಗೆ ಜೇಬೂ ಬರಿದಾಯಿತು. ಆಗ, "**ಅವಳಿಗೆ** ಯಾವ ಬಹುಮಾನವೂ ಬೇಡವೆ?" ಎಂದು ಇಲಿ ಕೇಳಿತು. "ಅಗತ್ಯವಾಗಿ, ಕೊಟ್ಟೇಕೊಡಬೇಕು. ಕೊಡದೆಯಿರುವುದು ಯಾವ ನ್ಯಾಯ?" ಎಂದು ಹೆಂಟೇಗೊದ್ದ ಕೇಳಿತು. ಯಾವ ವಿಚಿತ್ರ ಬಹುಮಾನವನ್ನು ಪ್ರಾಣಿಗಳು ತನಗೆ ಕೊಡಬಹುದೆಂದು ಪಾಪಚ್ಚಿ ಆಲೋಚಿಸಿದಳು. ಆದರೆ, ಆಳಿಲು, "ಅಮ್ಮಾ! ನಿಮ್ಮ ಜೇಬಿನಲ್ಲಿ ಇನ್ನೇನಿದೆ, ನೋಡಿ" ಎಂದು ಬೇಡಿ ಕೊಂಡಿತು. ಪಾಪಚ್ಚಿ ಒಂದು ಸಣ್ಣ ರಬ್ಬರ್ ಚೂರನ್ನು ತೆಗೆದು ಹೆಂಟೇಗೊದ್ದನ ಕೈಗೆ ಕೊಟ್ಟಳು. ಅದನ್ನು ಆದರದಿಂದ ಸ್ವೀಕರಿಸಿ, ಹೆಂಟೇಗೊದ್ದನು ಪಾಪಚ್ಚಿಯ ಸುತ್ತ ಎಲ್ಲರನ್ನೂ ಕರೆದು ಕೂರಿಸಿ, "ಈ ದಿನ ಇಲ್ಲಿ ನೆರೆದಿರುವ ಮಹನೀಯರ ಪರವಾಗಿ, ಅವರ ಜ್ಞಾಪಕಾರ್ಥವಾಗಿ ಈ ರಬ್ಬರ್ವೃಕ್ಷ ರಸವನ್ನು ತಮಗೆ ಸಮರ್ಪಿಸಿರುತ್ತೇವೆ, ಸ್ವೀಕರಿಸಬೇಕು, ಮಹಾತಾಯಿ!" ಎಂದು ಒಂದು ಚಿಕ್ಕ ಉಪನ್ಯಾಸವನ್ನು ಕೊಟ್ಟಿತು. ಎಲ್ಲರೂ ಚಪ್ಪಾಳೆ ತಟ್ಟಿದರು. ಗಿಳಿ ಮಾತ್ರ, "ಈಗ ಹೇಳಿದ್ದು ಕನ್ನಡ ತಾನೆ?" ಎಂದು ಹೇಳಿ ಹೆಂಟೇಗೊದ್ದನ ಭಾಷಾಶೈಲಿಯನ್ನು ಕೊಂಚ ಹಾಸ್ಯಮಾಡಿತು. ಪಾಪಚ್ಚಿಗೆ ನಗು ಬಂತು. ಆದರೂ ಇತರರು ಅಷ್ಟು ಗಂಭೀರವಾಗಿರುವುದನ್ನು ಕಂಡು ಅವಳು ನಗುವನ್ನು ತಡೆದಳು. ತನ್ನ ಕೃತಜ್ಞತೆಯನ್ನು ಸೂಚಿಸುವ ಸಲುವಾಗಿ ಅವಳು ಯಾವ ಉಪನ್ಯಾಸ ವನ್ನೂ ಕೊಡಲಿಲ್ಲ. ಸುಮ್ಮನೆ ಕೈ ಜೋಡಿಸಿ, ಸಭೆಗೆ ವಂದನೆಯನ್ನರ್ಪಿಸಿ ಬಹುಮಾನವನ್ನು ಮತ್ತೆ ಜೇಬಿನಲ್ಲಿರಿಸಿದಳು. ಅಷ್ಟೆ.

ಅನಂತರ ಎಲ್ಲರೂ ಕಡಲೆಕಾಯಿ ಬೀಜವನ್ನು ತಿಂದರು. ಕೆಲವರಿಗೆ ಅದರ ರುಚಿ ಗೊತ್ತಾಗುವಷ್ಟರಲ್ಲಿಯೇ ಬೀಜ ಒಳಕ್ಕೆ ಹೋಗಿಬಿಟ್ಟಿತಂತೆ. ಹಲ್ಲಿಮರಿಗೆ ಒಂದು ಅನಾಹುತವೇ ಆಯಿತು. ಬೀಜ ಗಂಟಲಲ್ಲಿ ಸಿಕ್ಕಿಕೊಂಡಿತು. ಏನು ಮಾಡುವುದು? ಪ್ರಾಣಕ್ಕೇ ಬಂತು. ಆದರೆ, ಗಿಳಿ ಬಹಳ ಬುದ್ಧಿವಂತಿಕೆಯಿಂದ ಅದರ ಕುತ್ತಿಗೆಗೆ ಸರಿಯಾಗಿ ಒಂದು ಪೆಟ್ಟು ಕೊಟ್ಟು ಕಡಲೆಕಾಯಿ ಬೀಜವನ್ನು ಒಳಕ್ಕೆ ನೂಕಿತು. ಇಲ್ಲದಿದ್ದರೆ ಅದರ ಗತಿ ಏನಾಗುತ್ತಿತ್ತೋ, ಶಿವನೇ ಬಲ್ಲ.

---

## ಬಾಲ–ಕಥೆ

ಮತ್ತೊಮ್ಮೆ ಎಲ್ಲರೂ ಬಿಳಿ ಇಲಿಯ ಸುತ್ತ ಸೇರಿದರು. ಪಾಪಚ್ಚಿ, "ರೀ, ನಿಮ್ಮ ಚರಿತ್ರೆ ಹೇಳುತ್ತೇನೆ ಅಂದಿರಲ್ಲಾ. ನಾ....ಮತ್ತು ಬೆ....ಗಳ ಮೇಲೆ ನಿಮಗೆ ಏಕೆ ದ್ವೇಷ ಉಂಟಾಯಿತೆಂದು ತಿಳಿಸುತ್ತೇನೆ ಅಂದಿರಿ. ಈಗ ಹೇಳಿ. ಇವರೆಲ್ಲರೂ ಇದ್ದಾರೆ. ಸರಿಯಾದ ಸಮಯ. ಕಥೆ ಕೇಳೋಣ" ಎಂದಳು. ಇಲಿ "ನನ್ನ ಜೀವನ ಕಥೆಯೆಲ್ಲವನ್ನೂ ಸುವಿಸ್ತಾರವಾಗಿ ಹೇಳಲು ಸಮಯ ಸಾಲದು. ನಿಮಗೂ ಪುರಸತ್ತಿರಲಾರದು. ಈಗ ಬರಿಯ ಬಾಲಕಥೆಯನ್ನು ಮಾತ್ರ ಹೇಳುತ್ತೇನೆ. ಆಮೇಲಿನ ಕಥೆಯನ್ನು ಇನ್ನೊಂದು ದಿನ ಕೇಳುವಿರಂತೆ" ಎಂದಿತು.

ಪಾಪಚ್ಚಿಯ ಮನಸ್ಸಿನಲ್ಲಿ 'ಬಾಲಕಥೆ' ಎಂದರೆ 'ಬಾಲದ ಕಥೆ' ಎಂದು ಭಾಸವಾಯಿತು. ಇಲಿ ಬಾಲಕಥೆಯೆಂದು ಹೇಳಿದಾಗ ತನ್ನ ಬಾಲ್ಯದ ಕಥೆಯೆಂದೇ ತಿಳಿದುಕೊಂಡಿತು—ರಾಮಾಯಣದಲ್ಲಿ ಬಾಲಕಾಂಡ ಎಂದು ಹೇಳುವ ಹಾಗೆ. ಆದರೂ ಪಾಪಚ್ಚಿ ಇಲಿಯ ಬಾಲವನ್ನೇ ನೋಡುತ್ತಾ, ಕಥೆಯ ಪ್ರತಿಯೊಂದು ಭಾಗವನ್ನೂ ಬಾಲದ ಒಂದು ಭಾಗದ ಕಥೆಯೆಂದು ಭಾವಿಸುತ್ತಿದ್ದಳು. ಇಲಿಯ ಕಥೆ ಬೆಳೆದ ಹಾಗೆಲ್ಲಾ ಅದರ ಬಾಲವೂ ಕೂಡ ಡೊಂಕು ಡೊಂಕಾಗಿ ಬೆಳೆದ ಹಾಗೆ ಅವಳಿಗೆ ತೋರಿತು.

ಟ್ರೈಗರೆಂಬ ನಾಯಿ ತನ್ನ
ನೆರೆಯಲಿದ್ದ ಇಲಿಯ ಕರೆದು,
"ನಿನ್ನ ಮೇಲೆ ತಪ್ಪು ಹೊರಿಸಿ
ಜಡ್ಜಿ ಮುಂದೆ ನಿಲಿಸುವೆ,
ಬಾರೊ ಬೇಗ" ಎಂದಿತು.
ಇಲಿಯು, ಪಾಪ, ಅತ್ತು ಕರೆದು
"ಕೇಸು, ಗೀಸು, ಜಡ್ಜಿ, ಗಿಡ್ಜಿ
ಬೇಡಿ, ಬಿಡಿರಿ!" ಎನ್ನಲು
"ನಾನೆ ಲಾಯರ್ನಾನೆ ಜಡ್ಜಿ"
ಎಂದು ನಾಯಿ ಬೊಗಳುತಾ
ಮರಣ ಶಿಕ್ಷೆ
ವಿಧಿಸಿತು.

ಪಾಪಚ್ಚಿ ಕಥೆಯ ಮೇಲೆ ಗಮನವಿಡದೆ ತನ್ನ ಬಾಲವನ್ನೇ ದಿಟ್ಟಿಸುತ್ತಿದ್ದುದು ಹೇಗೋ ಇಲಿಗೆ ತಿಳಿದುಹೋಯಿತು. ಅದು, "ನನ್ನನ್ನು ಕಥೆ ಹೇಳಬೇಕೆಂದು ಕಟ್ಟುಮಾಡಿ ಕೂರಿಸಿ ಈಗ ಯಾವುದೋ ಜ್ಞಾನದಲ್ಲಿ ಇರುವೆಯಲ್ಲಾ? ಇದು ಸರಿಯೆ? ಇದೇ ನಿಮ್ಮ ಮರ್ಯಾದೆಯೋ?" ಎಂದು ಅವಳನ್ನು ಗದರಿಸಿತು. "ಇಲ್ಲ, ನಾನು ಕಥೆ ಕೇಳುತ್ತಿದ್ದೆ. ಈಗ ಐದನೆಯ ಡೊಂಕಿನ ಕಡೆ ಬಂದಿದೀರಿ, ಅಲ್ಲವೆ?" ಎಂದು ಪಾಪಚ್ಚಿ ಕೇಳಿದಳು. ಇಲಿ ಕೋಪದಿಂದ ಕಿಡಿ ಕಿಡಿಯಾಗಿ "ಒಳ್ಳೆ ಗಂಟುಬಿತ್ತಲ್ಲಾ, ಈ ಹುಡುಗಿ!" ಎಂದು ಗೊಣಗಿತು. "ಅಯ್ಯೋ! ಬಾಲದಲ್ಲಿ ಗಂಟು ಬಿತ್ತೇನು? ಪರವಾ ಇಲ್ಲ. ನಾನು ಬಿಡಿಸುತ್ತೇನೆ" ಎಂದು ಪಾಪಚ್ಚಿ ಏನೂ ತಿಳಿಯದವಳ ಹಾಗೆ ಹೇಳಿಬಿಟ್ಟಳು. ಇಲಿಗೆ ಪೂರಾ ರೇಗಿತು; ಅದರ ಮೂಗರಳಿತು; ಬಾಲ ನೆಟ್ಟನೆ ನಿಂತುಕೊಂಡಿತು. 'ವಿಠಲಾಚಾರರ ಪುರಾಣ ಬಿಟ್ಟಲ್ಲಿಗೆ' ಅಂದ ಹಾಗೆ ಇಲಿ ಹೊರಟೇಹೋಯಿತು. ಎಲ್ಲರೂ, "ಬನ್ನಿ. ನಿಮ್ಮ ಕಥೆ ಪೂರೈಸಿಬಿಡಿ!" ಎಂದು ಬೇಡುತ್ತಾ ಅದರ

ಹಿಂದೆಯೇ ಕೊಂಚ ದೂರ ಹೋಗಿ ಕಾಲುಹಿಡಿದು ಕೇಳಿಕೊಂಡರು. ಊ ಹುಂ. ಮುನಿಸಿಕೊಂಡು ಓಡಿಯೇ ಹೋಯಿತು ಇಲಿ.

"ಇದೇನನ್ಯಾಯ! ಕಥೆಯನ್ನು ಅರ್ಧದಲ್ಲಿ ಅಮಂಗಳದಲ್ಲೇ ನಿಲ್ಲಿಸಿ ಇಷ್ಟೊಂದು ಜನರ ಮಾತನ್ನು ದೂಡಿಬಿಟ್ಟು ತನ್ನ ಹಠವೇ ಹಠ ಎಂದು ಓಡಿಬಿಡುವುದೇ?" ಎಂದು ಗಿಳಿ ಹೇಳಿತು. ಅಲ್ಲಿದ್ದ ಒಂದು ಮುದಿ ಗೂಬೆ ತನ್ನ ಮೊಮ್ಮಗುವನ್ನು ಹತ್ತಿರಕ್ಕೆಳೆದು "ನೋಡಿದೆಯಾ, ಮಗೂ, ಕೋಪ ಎಂದರೆ ಎಷ್ಟು ಕೆಟ್ಟದ್ದು. ಅದರಿಂದಾಗುವ ಹಾನಿಗಳೆಷ್ಟೆಂದು ನೋಡಿ ತಿಳಿದುಕೋ. 'ಕೋಪವೆಂಬುದನರ್ಥಸಾಧನ, ಕೋಪವೇ....'" ಎಂದು ಉಪದೇಶ ಮಾಡಿತು. ಗೂಬೆ ಮರಿ, "ಸಾಕು, ಅಜ್ಜಿ, ನಿನ್ನ ನೀತಿ ಬೋಧೆ. ಅದು ತಿಳಿದುಕೋ, ಇದು ತಿಳಿದುಕೋ, ಎಂದು ಮೂರು ಹೊತ್ತೂ ಕೇಳಿ ಕೇಳಿ ನನ್ನ ಕಿವಿ ಹುಣ್ಣಾಗಿದೆ. ನನಗೆ ಬೇಜಾರಾಗಿ ನಾನು ಹಗಲು ಹಗಲೇ ಎಲ್ಲಾದರೂ ದೇಶಾಂತರ ಹೊರಟುಬಿಡುತ್ತೇನೆ, ಅಷ್ಟೆ!" ಎಂದು ಎದುರುಬಿತ್ತು. ಪಾಪ. ಮುದುಕರು ಏನು ಮಾಡಿಯಾರು? ಕಣ್ಣು ಮುಚ್ಚಿಕೊಂಡು "ರಾಮ, ರಾಮ" ಎಂದರು. "ನಮ್ಮ ಮನೆ ಪಿಲ್ಲಿ ಇಲ್ಲಿದ್ದಿದ್ದರೆ ಇಲಿಯ ಅಹಂಕಾರವನ್ನು ಅಡಗಿಸಿ ಹಿಂದಕ್ಕೆ ಎಳೆದು ತಂದಿರುತ್ತಿದ್ದಳು" ಎಂದು ಪಾಪಚ್ಚಿ ತನಗೆ ತಾನೇ ಹೇಳಿಕೊಂಡಳು. ಆದರೂ ಅದು ಗಿಳಿಗೆ ಕೇಳಿಸಿ, "ಪಿಲ್ಲಿ ಅಂದರೆ ಯಾರು?" ಎಂದು ಪ್ರಶ್ನೆ ಹಾಕಿತು. ಪ್ರಾಣಿಗಳೆಲ್ಲವೂ ಅವಳ ಹತ್ತಿರ ಬಂದುವು. ಪಿಲ್ಲಿಯ ಗುಣಕಥನ ಮಾಡುವುದೆಂದರೆ ಪಾಪಚ್ಚಿಗೆ ಪರಮ ಸಂತೋಷ. "ಪಿಲ್ಲಿ ನಮ್ಮ ಮನೆ ಬೆಕ್ಕು. ಇಲಿಗಳನ್ನು ಹಿಡಿಯುವುದರಲ್ಲಿ ಪ್ರವೀಣೆ. ಹಕ್ಕಿಗಳನ್ನು ಹಿಡಿಯುವುದರಲ್ಲಿ ಬಲು ಜಾಣೆ. ಅವು ಕಣ್ಣಿಗೆ ಬಿದ್ದರೆ ಸಾಕು, ಯಮನ ಕೈಗೆ ಸಿಕ್ಕಿದ ಹಾಗೆ, ಬಿಡುಗಡೆಯೇ ಇಲ್ಲ."

ಪಾಪಚ್ಚಿ ಇಷ್ಟು ಹೇಳಿದ್ದೇ ತಡ, ಅಲ್ಲಿ ಒಂದು ಸಣ್ಣ ಗದ್ದಲ ವಾಯಿತು. ಹಕ್ಕಿಗಳೆಲ್ಲವೂ ಹೇಗಾದರೂ ಜಾರಿಕೊಳ್ಳುವುದೇ ಮೇಲೆಂದು ಕಂಡು ಹೊರಟುಹೋಗಲು ಉಪಾಯವನ್ನು ಹುಡುಕಿದವು. ಗಿಳಿ, "ಅಯ್ಯೋ! ತುಂಬಾ ಹೊತ್ತಾಗಿರಬೇಕಲ್ಲವೆ? ನಾನು ಮನೆಗೆ ಹೋಗ ಬೇಕು. ಯಜಮಾನರು ಬರುವ ಸಮಯ" ಎಂದು ಹೇಳಿ ಹೊರಟಿತು.

ಕಾಜಾಣ ತನ್ನ ಮಕ್ಕಳ ಕೈಗಳನ್ನು ಹಿಡಿದುಕೊಂಡು, "ಬನ್ನಿರಪ್ಪಾ, ಬನ್ನಿ. ತೂಕಡಿಸಬೇಡಿ. ಮನೆಗೆ ಹೋಗಿ ಹಾಸಿಗೆ ಹಾಸಿ ಮಲಗುವಿರಂತೆ" ಎಂದು ಹೇಳುತ್ತಾ ತಪ್ಪಿಸಿಕೊಂಡಿತು....ಕೊನೆಗೆ ಅಲ್ಲಿ ಪಾಪಚ್ಚಿ ಒಬ್ಬಳೇ ಉಳಿದಳು.

"ನಾಸು ಪಿಲ್ಲಿಯ ಮಾತನ್ನೆತ್ತಬಾರದಾಗಿತ್ತು" ಎಂದು ಪಾಪಚ್ಚಿ ಮನನೊಂದಳು. "ಇಲ್ಲಿ ಒಬ್ಬರಿಗೂ ಅವಳ ಮಾತು ರುಚಿಸುವುದಿಲ್ಲ. ಯಾರಿಗೂ ಅವಳ ನಡತೆ ಸರಿದೋರುವುದಿಲ್ಲ. ಯಾಕೋ ಕಾಣೆ. ಅವಳಂಥ ಬೆಕ್ಕು ಇನ್ನು ಯಾರ ಮನೆಯಲ್ಲಿಯೂ ಇಲ್ಲ...." ಎಂದು ಬಹಳ ವ್ಯಸನಪಟ್ಟಳು.

ಪಾಪ! ಚಿಕ್ಕ ಹುಡುಗಿ! ಅಲ್ಲಿ ಆ ಅರೆಬೆಳಕಿನಲ್ಲಿ ಸದ್ದಿಲ್ಲದ ಆ ಪಾತಾಳದಲ್ಲಿ ಒಬ್ಬಳೇ ಹೇಗೆ ಕಾಲಕಳೆದಳೋ ದೇವರೇ ಬಲ್ಲ. ಸುಮಾರು ಒಂದು ಗಂಟೆಯ ಕಾಲ ಒಂಟಿಯಾಗಿ ಯಾವ ಯಾವುವೋ ಯೋಚನೆಗಳಲ್ಲಿದ್ದಳು. ಕೊನೆಗೆ, ಪುಟ್ಟ ಪುಟ್ಟ ಹೆಜ್ಜೆಯ ಸದ್ದಾಯಿತು. ಬಾಲಕಥೆಯನ್ನು ಮುಗಿಸಿ ಹೋಗೋಣವೆಂದು ಇಲಿ ಹಿಂದಿರುಗಿರಬಹುದೆಂದು ಅತ್ತಕಡೆ ತಿರುಗಿನೋಡಿದಳು.

---

## ಸಣ್ಣಪ್ಪನ ಸಾಹಸ

ಬಂದದ್ದು ಇಲಿ ಅಲ್ಲ,....ಬಿಳಿಯ ಮೊಲ. ಗಾಬರಿಯಿಂದ ಅರಳಿದ ಕಣ್ಣುಗಳು. ಏನನ್ನೋ ಹುಡುಕುತ್ತಿರುವಂತೆ ನಾಲ್ಕು ಕಡೆಗೂ ನೋಡುತ್ತಾ ಸರ ಸರನೆ ಮೊಲವು ಒಳಗೆ ಬಂತು. ಒಳಗೊಳಗೆ ಏನೇನೋ ಗೊಣಗುಟ್ಟುತ್ತಲೇ ಇತ್ತು. "ಅಯ್ಯೋ! ಅಮ್ಮಾವರು ಏನಂದಾರು? ನನ್ನ ಕರವಸ್ತ್ರ, ಡಬ್ಬಿ! ಸನ್ನಿಧಾನದಲ್ಲಿ ಏನು ಅವಮಾನವಾಗುವುದೋ ತಿಳಿಯದು. ನನ್ನ ಕತ್ತು ಕುಯ್ದುಬಿಡುತ್ತಾರೆ, ಖಂಡಿತ. ಬೆಕ್ಕಿನ ಬಾಲ ಸುಣ್ಣಗೆ, ನನ್ನ ತಲೆ ಮಣ್ಣಿಗೆ! ಎಲ್ಲಿ ಹಾಕಿಬಿಟ್ಟೆ? ದೇವರೇ!" ಎಂದು ಹೇಳುತ್ತಾ ಮೊಲವು ಪಾಪಚ್ಚಿ ಇದ್ದಲ್ಲಿಗೆ ಬಂತು.

"ಡಬ್ಬಿ, ಕರವಸ್ತ್ರ ಇಲ್ಲೇ ಎಸೆದು ಓಡಿಹೋಯಿತು! ಈಗ ಪೇಚಾಡುತ್ತಾ ಇದೆ ಮಂಕು" ಎಂದು ಹೇಳುತ್ತಾ ಪಾಪಚ್ಚಿಯೂ ಸುತ್ತ ನೋಡಿದಳು. "ಪಾಪ! ಒಂದು ನಸ್ಯದ ಡಬ್ಬಿ ಇಲ್ಲದಿದ್ದರೆ ಇಷ್ಟೊಂದು ದೊಡ್ಡ ಶಿಕ್ಷೆಯೇ? ಏನನ್ಯಾಯ?" ಎಂದು ಹೇಳಿ ಪಾಪಚ್ಚಿ ಅಲ್ಲೆಲ್ಲಾ ಹುಡುಕಿದಳು. "ನಾನೆಲ್ಲಿ ಇಟ್ಟೆನೋ ಜ್ಞಾಪಕವಿಲ್ಲವಲ್ಲಾ" ಎಂದು ವ್ಯಥೆಪಟ್ಟಳು.

ಆದರೆ, ಇದೀಗ ವಿಚಿತ್ರ! ಅಲ್ಲಿ ಅವರೆಲ್ಲರೂ ಬಿದ್ದೊದ್ದಾಡಿದ ಕೆರೆಯೂ ಇರಲಿಲ್ಲ, ಗಾಜಿನ ಮೇಜೂ ಇರಲಿಲ್ಲ, ಕರವಸ್ತ್ರವೂ ಮಾಯವಾಗಿತ್ತು. ಆ ಸ್ಥಳವೇ ಬದಲಾಗಿ ಒಂದು ಹೊಸ ರೂಪನ್ನು ತಳೆದಿತ್ತು.

ಅಷ್ಟರಲ್ಲಿಯೇ ಮೊಲದ ದೃಷ್ಟಿ ಪಾಪಚ್ಚಿಯ ಮೇಲೆ ಬಿತ್ತು. ಅದು ಅವಳನ್ನು ಕುರಿತು, "ತಿಮ್ಮಿ! ಇಲ್ಲಿ ಏನು ಮಾಡುತ್ತೀಯೇ? ನಡಿ ಮನೆಗೆ! ಓಡು! ನನ್ನ ಕೊಠಡಿಯಲ್ಲಿರುವ ಮೇಜಿನ ಮೇಲೆ ನನ್ನ ಡಬ್ಬಿ, ಕರವಸ್ತ್ರ ಎರಡೂ ಇವೆ. ತೆಗೆದುಕೊಂಡು ಓಡಿ ಬಾ! ನಾನಿಲ್ಲಿಯೇ ನಿಂತಿರುತ್ತೇನೆ" ಎಂದು ಆಜ್ಞಾಪಿಸಿತು.

ಪಾಪಚ್ಚಿಗೆ ಭಯವಾಯಿತು. ಏಕೆಂದರೆ, ಅಂದಿನವರೆಗೂ ಹೀಗೆ ಯಾರೂ ಅವಳನ್ನು ಮಾತನಾಡಿಸಿರಲಿಲ್ಲ. ಅವಳು ಏನೊಂದೂ ಹೇಳದೆ ಮೊಲ ತೋರಿಸಿದ ಬೆರಳಿಗೆ ನೇರವಾಗಿ ಓಡಿದಳು....ಪಾಪ! ತನ್ನ ಹೆಸರು 'ತಿಮ್ಮಿ' ಎಂದಲ್ಲ ಎಂದು ಹೇಳುವುದಕ್ಕೂ ಕೂಡ ಅವಳಿಗೆ ಆಗ ಧೈರ್ಯ ಬರಲಿಲ್ಲ.

ಕೊಂಚ ದೂರ ಹೋದ ಮೇಲೆ "ನಾನೇನು ಅವನ ಆಳೇ? 'ನಡಿ,' 'ಓಡು,' 'ಬಾ,' 'ಹೋಗು,' ಅಂತ ಹೇಳುವುದಕ್ಕೆ. ನಾನು 'ತಿಮ್ಮಿ' ಅಲ್ಲ ಎಂದು ತಿಳಿದಾಗ ಅವನಿಗೇ ನಾಚಿಕೆಯಾಗುತ್ತೆ. ಇಂಥಾವಳನ್ನು ಹೀಗೆ ಅಂದೆನಲ್ಲಾ ಎಂದು ಆಗ ನೊಂದುಕೊಳ್ಳುತ್ತಾನೆ, ಇರಲಿ. ಈ ಅವಮಾನಕ್ಕೆ ಅದೇ ಸರಿಯಾದ ಶಿಕ್ಷೆ. ಎಲ್ಲೋ ಶುದ್ಧ ಮಂಕು. ತಿಮ್ಮಿ ಅಂತೆ ನಾನು, ತಿಮ್ಮಿ! ಏನಾದರೂ ಆಗಲಿ! ಅವನು ಹೇಳಿದ ಸಾಮಾನು ಸಿಕ್ಕಿದರೆ ತೆಗೆದುಕೊಂಡು ಹೋಗಿ ಕೊಡೋಣ. ಪಾಪ! ತಲೆ ಹೋಗುವ ಸಂದರ್ಭವಂತೆ" ಎಂದು ಹೇಳುತ್ತಾ ಓಡಿದಳು.

ಅಷ್ಟು ಹೊತ್ತಿಗೆ ಸರಿಯಾಗಿ ಒಂದು ಪುಟ್ಟ ಬಂಗಲಿಯ ಬಾಗಿಲೆದುರಿಗೆ ಬಂದಳು. ಅಲ್ಲಿ ಒಂದು ಹಿತ್ತಾಳೆ ತಗಡಿನ ಮೇಲೆ ಹೊಳೆ ಹೊಳೆವ ಕೆಂಪು ಅಕ್ಷರಗಳಲ್ಲಿ "ಬಿ. ಮೊಲ" ಎಂದು ಬರೆದಿತ್ತು. ಬಾಗಿಲನ್ನು ತಟ್ಟಿದಳು. ಅದು ತಾನಾಗಿಯೇ ತೆರೆಯಿತು. ಪಾಪಚ್ಚಿ ಹೆದರದೆ ಒಳಗೆ ನುಗ್ಗಿದಳು. ಹೊಸಲನ್ನು ದಾಟಿದ ಕೂಡಲೇ ಮಹಡಿಗೆ ಹೋಗುವ ಮೆಟ್ಟಲು ಸಾಲು ಕಾಣಿಸಿತು. ಮೆಟ್ಟಲುಗಳನ್ನು ಒಂದು ಸಲಕ್ಕೆ ಎರಡು ಮೂರಾಗಿ ಹಾರುತ್ತಾ ಮೇಲಕ್ಕೆ ಹೋದಳು. ನಿಜವಾದ 'ತಿಮ್ಮಿ' ತನ್ನನ್ನು ಎಲ್ಲಿಯಾದರೂ ಕಂಡರೆ ಏನು ಮಾಡುವಳೋ ಎಂದು ಅವಳಿಗೆ ದಿಗಿಲು.

"ಇದೇನು ಹಣೇಬರಹ! ಮೊಲದ ಆಳು! ಮನೆಯಲ್ಲಿ ಅಣ್ಣ ಏನಾದರೂ ಮಹಡಿ ಮೇಲಿನಿಂದ ತೆಗೆದುಕೊಂಡು ಬಾ ಎಂದರೆ ಒಲ್ಲೆ ಎಂದು ಹೇಳಿ ಶಾಮುವನ್ನೇ ಮೆಟ್ಟಲು ಹತ್ತಿಸುತ್ತಿದ್ದೆ. ಸರಿ. ಇನ್ನೇನು! ಪಿಲ್ಲಿ ಕೂಡ ನನ್ನನ್ನು ಬೇಕು ಬೇಕಾದ ಕಡೆ ಓಡಿಸುತ್ತಾಳೆ. 'ಪಾಪಚ್ಚಿ! ಇಲ್ಲಿ ಬಾ! ಬೇಗ ಬಾ! ನನ್ನ ಜತೆಯಲ್ಲಿ ಪಕ್ಕದ ಮನೆತನಕ ಬಾ. ಕತ್ತಲೆ. ಒಬ್ಬಳೇ ಹೋಗಲಾರೆ' ಅನ್ನುತ್ತಾಳೆ. ಅಮ್ಮ ನನ್ನನ್ನು 'ಊಟಕ್ಕೇಳು' ಅಂದರೆ, 'ಇಗೋ ಬಂದೆ, ಅಮ್ಮಾ! ಪಿಲ್ಲಿ ನನ್ನನ್ನು ಇಲ್ಲಿ ನಿಲ್ಲಿಸಿಬಿಟ್ಟು ಹೋಗಿದಾಳೆ. ಇದರೊಳಗೆ ಒಂದು ಇಲಿ ಸೇರಿಕೊಂಡಿದೆ. ಅದು ಹೊರಗೆ ಬಂದು ಓಡಿಹೋಗದ ಹಾಗೆ ನಾನು ಇಲ್ಲೇ ಕಾಯುತ್ತಿರಬೇಕಂತೆ. ಈಗ ಬಂದುಬಿಡುತ್ತಾಳೆ. ನಾನು ಇಲ್ಲಿಂದ ಕದಲಬಾರದಂತೆ. ಈಗ ಬಂದು ಬಿಡುತ್ತಾಳೆ. ಪಕ್ಕದ ಮನೆಗೆ ಹೋಗಿದಾಳೆ' ಅಂತ ನಾನು ಅನ್ನ ಬೇಕಾಗುತ್ತೆ. ಆದರೆ, ಹೀಗೆಲ್ಲಾ ನನ್ನ ಕೈಯಲ್ಲಿ ಕೆಲಸ ತೆಗಿಸುವುದನ್ನು ಅಣ್ಣ ಕಂಡರೆ ಮನೆಯಿಂದ ಒದ್ದೋಡಿಸಿಬಿಡುತ್ತಾನೆ, ಅಷ್ಟೆ! ಮೊದಲಿಂದಲೂ ಶಾಮು ಚಾಡಿ ಹೇಳಿ ಹೇಳಿ ಅಣ್ಣನಿಗೆ ಅವಳು ಅಂದರೆ ಅಷ್ಟಷ್ಟೆ!"

ಇಷ್ಟು ಹೊತ್ತಿಗೆ ಪಾಪಚ್ಚಿ ಬಂಗಲಿಯ ಉಪ್ಪರಿಗೆಯಲ್ಲಿದ್ದ ಮೊಲದ ಖಾಸಾ ಕೊಠಡಿಗೆ ಬಂದುಬಿಟ್ಟಿದ್ದಳು. ತಕ್ಕಮಟ್ಟಿಗೆ ವಿಶಾಲವಾಗಿಯೇ ಇತ್ತು. ಅಲ್ಲಿ ಒಂದು ಆರಾಮ ಕುರ್ಚಿ. ಅದರ ಮೇಲೆ ಒರಗಿಕೊಂಡು ಹಾಗೆಯೇ ಕೈ ನೀಡಿದರೆ ಸಿಕ್ಕುವಷ್ಟು ಹತ್ತಿರದಲ್ಲಿ ಅಷ್ಟೇ ಎತ್ತರದ ಒಂದು ಕರಿಯ ಮರದ ಗುಂಡು ಮೇಜು. ಅದರ ಮೇಲೆ ಒಂದು ಬೆಳ್ಳಿಯ ನಸ್ಯದ

ಡಬ್ಬಿ, ಒಂದು ಕೆಂಪು ಕರವಸ್ತ್ರ. ಅವೆರಡನ್ನೂ ಎತ್ತಿಕೊಂಡು ಬಾಗಿಲ ಹತ್ತಿರ ಬಂದಳು. ಗೋಡೆಯ ತುಂಬ ಮೊಲದ ಮರಿಗಳ ಪಠಗಳಿದ್ದುವು. ಎಲ್ಲವೂ ಒಂದಕ್ಕಿಂತ ಇನ್ನೊಂದು ಜೀವಕಳೆಯಿಂದ ತುಂಬಿ, ಮುದ್ದಾಗಿದ್ದುವು. ಎಲ್ಲದರ ಕಣ್ಣಲ್ಲಿಯೂ ಚಟುವಟಿಕೆ ತುಳುಕುತ್ತಿತ್ತು. ಅವುಗಳನ್ನು ನೋಡಿ ಆನಂದಪಡುತ್ತಾ ಪಾಪಚ್ಚಿ ಕೊಂಚ ಹೊತ್ತು ಅಲ್ಲಿಯೇ ನಿಂತಳು.

ಅಲ್ಲಿ ಒಂದು ನಿಲುವುಗನ್ನಡಿಯೂ ಇತ್ತು. ಅದರ ಪಕ್ಕದಲ್ಲಿ, ಕಿಟಿಕಿಯಲ್ಲಿಯೇ, ಒಂದು ಸೀಸೆಯ ತುಂಬ ನೀಲಿ ಬಣ್ಣದ ಯಾವುದೋ ಔಷಧಿಯಿದ್ದದ್ದು ಅವಳ ಕಣ್ಣಿಗೆಬಿತ್ತು. "ಕುಡಿಯಿರಿ" ಎಂದು ಬರೆದಿರಲಿಲ್ಲವಾದರೂ ಅವಳಿಗೆ ಕುಡಿಯೋಣವೆನಿಸಿತು. ವಾಸನೆ ಚೆನ್ನಾಗಿಯೇ ಇತ್ತು. "ವಿಷ" ಎಂಬ ಚೀಟಿಯೂ ಇರಲಿಲ್ಲ. "ಇನ್ನೇನು? ಅಪಾಯವೇನೂ ಆಗಲಾರದು. ಏನಾದರೂ ತಮಾಷೆ ಆದರೂ ಆಗಬಹುದು. ನಾನು ಇಷ್ಟು ಗಿಡ್ಡವಾಗಿರುವುದರಿಂದಲೇ ಕಂಡಕಂಡವರೆಲ್ಲರೂ ನನಗೆ ಕೆಲಸ ಹೇಳುತ್ತಿರುವುದು! ದೇವರೇ ಗತಿ! ಏನಾಗುತ್ತೆ ಎಂದು ನೋಡಿಯೇ ಬಿಡೋಣ" ಎಂದು ಎರಡು ಮೂರು ಚಮಚಗಳಷ್ಟು ಔಷಧಿಯನ್ನು ಕುಡಿದಳು.

ಆ ಔಷಧಿಯ ಪ್ರಭಾವ ಏನನ್ನುತ್ತೀರಿ! ಅಬ್ಬಬ್ಬ! ಅದ್ಭುತವಾದ ಶಕ್ತಿ. ನಾಲ್ಕು ತೊಟ್ಟು ಒಳಗೆ ಬೀಳುವುದರೊಳಗೆ ಪಾಪಚ್ಚಿಯ ತಲೆ ಮೇಲುಚಾವಣಿಗೆ ಹೊಡೆಯಿತು. ಕೊಂಚ ಹೊತ್ತಿನಲ್ಲಿಯೇ ಬೆನ್ನು ಬಗ್ಗಿಸದೆ ನಿಲ್ಲಲಾಗಲಿಲ್ಲ. ಮಲಗಿಕೊಳ್ಳಬೇಕಾಯಿತು. ಎರಡು ಕಾಲುಗಳನ್ನೂ ಗೋಡೆಯ ಮೇಲೆ ಒರಗಿಸಬೇಕಾಯಿತು. "ಇನ್ನೂ ಬೆಳೆದರೆ ಬಹಳ ತೊಂದರೆ....ಈ ಕೋಣೆಯಿಂದ ಹೊರಗೆ ಹೇಗೆ ಹೋಗುವುದು? ತಿಮ್ಮಿ ಬಂದರೆ ಏನು ಗತಿ?....ಥೂ. ನಾನು ಅಷ್ಟು ಕುಡಿಯಬಾರದಾಗಿತ್ತು" ಎಂದು ಪಾಪಚ್ಚಿ ತನಗೆ ತಾನೇ ಹೇಳಿಕೊಂಡಳು....ಆಗ ಅವಳು ಸುಮಾರು ಮೂರಾಳು ಎತ್ತರ, ಎತ್ತರದಷ್ಟೇ ದಪ್ಪ. ಪಾಪ! ಒಂದು ಕೈಯನ್ನು ತಲೆದಿಂಬಾಗಿಟ್ಟುಕೊಂಡು, ಕಾಲನ್ನು ಮಡಿಸಿ, ಬಾಗಿಲಿಗೆ ತಲೆ ತಗುಲಿಸಿಕೊಂಡು ಮಲಗಿಕೊಂಡಳು., ಇನ್ನೊಂದು

ಕೈಯನ್ನು ಕಿಟಕಿಯಿಂದ ಹೊರಗೆ ನೀಡಬೇಕಾಯಿತು. "ಬಂದದ್ದೆಲ್ಲಾ ಬರಲಿ, ಗೋವಿಂದನ ಕೃಪೆಯಿರಲಿ" ಎನ್ನುವ ಹಾಗೆ ಅವಳು ಸುಮ್ಮನೆ ಸದ್ದುಮಾಡದೆ ಬಿದ್ದಿದ್ದಳು. ಪಾಪಚ್ಚಿಯ ಪುಣ್ಯಕ್ಕೆ ಔಷಧಿಯ ಶಕ್ತಿ ಅಲ್ಲಿಗೇ ಮುಗಿಯಿತು.

"ಮನೆಯಲ್ಲಿ ಇದಕ್ಕಿಂತ ಎಷ್ಟೋ ನೆಮ್ಮದಿಯಾಗಿದ್ದೆ. ಹೀಗೆ ಘಳಿಗೆ ಘಳಿಗೆಗೂ ಕುಗ್ಗುವುದು ಹಿಗ್ಗುವುದು ಇರಲಿಲ್ಲ. ಇಲಿಗಳೂ ಮೊಲಗಳೂ ಓಡಾಡಿಸುತ್ತಿರಲಿಲ್ಲ....ಥೂ. ನಾನಿಲ್ಲಿಗೆ ಧುಮುಕಿದ್ದೇ ತಪ್ಪು....ಅಂತು, ಅಕ್ಕ ಹೇಳುತ್ತಿದ್ದ ಕಥೆಗಳಲ್ಲಿ ನಡೆಯುವ ಹಾಗೆ ಕೆಲವು ಅನುಭವಗಳು ನನಗೂ ಆಗುತ್ತಿವೆ. ಆಗ ಶಾಮು ಅದೆಲ್ಲಾ ಸುಳ್ಳು, ನಂಬಬಾರದು ಎಂದು ಹೇಳುತ್ತಿದ್ದ. ಈಗ? ನನ್ನ ಅನುಭವಗಳನ್ನೂ ಬರೆದು ಅಚ್ಚುಹಾಕಿಸಬೇಕು. ಆಗಲಾದರೂ ಜನಗಳು ನಂಬುತ್ತಾರೆಯೋ ಇಲ್ಲವೋ? ನಾನಿನ್ನೂ ಪುಟ್ಟ ಹುಡುಗಿ. ಪುಸ್ತಕ ಬರೆದರೆ ಯಾರೂ ಓದು ವುದಿಲ್ಲ, ನಗುತ್ತಾರೆ, ಅಷ್ಟೆ! ಏನು? ನಾನು ಚಿಕ್ಕ ಹುಡುಗಿಯೇನು? ಸರಿಹೋಯ್ತು. ಕೊಠಡಿ ತುಂಬಾ ಆವರಿಸಿಕೊಂಡು ಜಾಗ ಸಾಲದೆ ಪೇಚಾಡುತ್ತಿದೇನೆ! ಹೋಗಲಿ! ಎತ್ತರ ದಪ್ಪ ಎಷ್ಟು ಹೆಚ್ಚಾದರೂ ವಯಸ್ಸುಮಾತ್ರ ಕೂಡಿಬರದೆ ಇದ್ದರೆ ಅದೇ ಪುಣ್ಯ!....ಇಲ್ಲ, ಇಲ್ಲ....ಅದೂ ಕಷ್ಟವೆ. ಯಾವಾಗಲೂ ಪಾಠ ಗಟ್ಟಿಮಾಡಬೇಕಾಗುತ್ತೆ ....ಭೂವಿವರಣೆ, ವ್ಯಾಕರಣ, ಹಾರ್ಮೋನಿಯಂ....ಅಯ್ಯಯ್ಯೋ!"

ಹೀಗೆ ತನಗೆ ತಾನೇ ಏನೇನೋ ಹೇಳಿಕೊಳ್ಳುತ್ತಾ ಪಾಪಚ್ಚಿ ಆ ಕೋಣೆಯಲ್ಲಿಯೇ ಮಲಗಿದ್ದಳು. ಎದ್ದು ನಿಲ್ಲಲು ಸಾಧ್ಯವೇ ಆಗಲಿಲ್ಲ. ಆಗ ಹೊರಗಡೆ ಯಾರೋ "ತಿಮ್ಮ, ತಿಮ್ಮ" ಎಂದು ಕೂಗಿದರು. "ಡಬ್ಬಿ ಎಲ್ಲಿ? ಹೊತ್ತಾಗಿಹೋಯಿತು. ಬೇಗ ತಾ" ಎಂದು ಹೇಳಿದರು. ಅನಂತರ ಮೆಟ್ಟಲುಗಳ ಮೇಲೆ ಯಾರೋ ಸರ ಸರನೆ ಶಪಿಸುತ್ತಾ ಹತ್ತಿರ ಬರುವ ಸದ್ದಾಯಿತು. ತಾನು ಸಾವಿರ ಮೊಲಗಳಷ್ಟು ದಪ್ಪವಾಗಿದ್ದರೂ ಪಾಪಚ್ಚಿಗೆ ನಡುಕಹತ್ತಿತು....ಆ ಮನೆಯೆಲ್ಲವೂ ಅವಳೊಂದಿಗೆ ನಡುಗಿತು!

ಮೊಲ ಬಾಗಿಲನ್ನು ತಟ್ಟಿತು; ತಳ್ಳಿತು; ತೆಗೆಯಲು ಪ್ರಯತ್ನಿಸಿತು. ಸಾಧ್ಯವಾಗಲಿಲ್ಲ. "ಚಿಂತೆ ಇಲ್ಲ; ಕಿಟಿಕಿಯಿಂದ ಒಳಗೆ ನುಗ್ಗುತ್ತೇನೆ"

ಎಂದು ಹೇಳುತ್ತಾ ಮೆಟ್ಟಿಲನ್ನಿಳಿಯಿತು. "ಸುಗ್ಗದ ಹಾಗೆ ನಾನು ಮಾಡು ತ್ತೇನೆ" ಎಂದು ಪಾಪಚ್ಚಿ ನಿರ್ಧರಮಾಡಿಕೊಂಡಳು....ಕೊಂಚ ಹೊತ್ತಿನಲ್ಲಿ ಹೊರಗೆ, ಕಿಟಿಕಿಯ ಹತ್ತಿರ ಮೊಲದ ಮಾತು ಕೇಳಿಸಿತು. ಪಾಪಚ್ಚಿ ಕೈಯನ್ನು ಕೊಂಚ ಚಾಚಿ ಬೀಸಿದಳು......ಅವಳ ಕೈಗೆ ಯಾವುದೂ ಸಿಕ್ಕಲಿಲ್ಲ. ಆದರೂ, "ಅಯ್ಯಪ್ಪಾ!" ಎಂಬ ಒಂದು ಆರ್ತಧ್ವನಿ ಮಾತ್ರ ಕೇಳಿಸಿತು. ಯಾವುದೋ ಒಂದು ಪದಾರ್ಥ ಕೆಳಗೆ ಹೂವಿನ ಕುಂಡಗಳ ಮೇಲೆ ಬಿತ್ತು....ಅನಂತರ ಕೊಂಚ ಹೊತ್ತು ಮೌನ....

ಮತ್ತೆ ಮೊಲದ ಧ್ವನಿ!....ಹಿಂದಿನಷ್ಟು ಜೋರಾಗಿಲ್ಲ....ನೋವಿ ನಿಂದ ನರಳುತ್ತಿರುವ ಹಾಗಿದೆ...."ಕರಿಯ! ಕರಿಯ! ಎಲ್ಲಿದೀಯಾ?" ಆಗ ಕರಿಯನೆಂಬುವನು, "ಇಲ್ಲಿದೇನೆ ಬುದ್ಧಿ! ನೆಲ ತೋಡಿ ಮಾವಿನ ಹಣ್ಣು ತೆಗೆಯುತ್ತಾ ಇದೇನೆ, ಬುದ್ಧಿ!" ಎಂದು ಉತ್ತರಕೊಟ್ಟನು. ಪಾಪಚ್ಚಿಗೆ ಆಶ್ಚರ್ಯವಾಯಿತು. "ಮಾವಿನ ಹಣ್ಣಿಗೆ ನೆಲ ತೋಡುತ್ತಾ ನಂತೆ!" ಎಂದು ತನಗೆ ತಾನೇ ಹೇಳಿಕೊಂಡಳು. "ಇಲ್ಲಿ ಬಾ!.... ಕೈ ಹಿಡಿದುಕೊ....ಮೆಲ್ಲಗೆ....ಹಾಗೆ. ಹಾಗೆ....ಅಯ್ಯೋ! ಅಲ್ಲಿ ಮುಟ್ಟಬೇಡ....ಪೂರಾ ನೋವು....ಹಾಗೆ....ನೋಡು, ಕರಿಯ, ಆ ಕಿಟಿಕಿಯಲ್ಲಿ ಕಾಣುತ್ತಾ ಇರುವುದು ಏನು?" ಎಂದು ಮೊಲವು ಕೇಳಿತು. "ಅದೇ? ಅದೊಂದು ಕೈ ಬುದ್ಧಿ! ಬಲಗೈ ಬುದ್ಧಿ" ಎಂದು ಕರಿಯ ಹೇಳಿದ.

ಪಾಪಚ್ಚಿಗೆ ತಡೆಯಲಾರದ ನಗು ಬಂತು. ಏಕೆಂದರೆ, ಅದು ಅವಳ ಎಡಗೈಯಾಗಿತ್ತು. ಆದರೂ ಗಟ್ಟಿಯಾಗಿ ನಕ್ಕರೆ ಕಟ್ಟಡವೇ ತಲೆಯ ಮೇಲೆ ಬೀಳಬಹುದೆಂಬ ಭಯದಿಂದ ಅವಳು ತಡೆದಳು. ಮೊಲವು "ಕೈ, ಅಂತೆ, ಕೈ! ಕಿಟಿಕಿ ತುಂಬ ತುರುಕಿಕೊಂಡಿದೆ; ಅಷ್ಟು ದೊಡ್ಡ ಕೈ ಯಾವ ಪ್ರಾಣಿಗಿದೆಯೋ? ಯಾರಾದರೂ ನಕ್ಕಾರು....ಇನ್ನೊಂದುಸಾರಿ ಹೀಗೆ ಪೆಚ್ಚು ಪೆಚ್ಚಾಗಿ ಒರಲಿದರೆ ತಲೆಯ ಮೇಲೆ ಕುದಿಯುವ ನೀರು ಹೊಯ್ದು ಬಿಟ್ಟೇನು,–ಜೋಕೆ!" ಎಂದು ಕರಿಯನನ್ನು ಗದರಿಸಿತು. "ದೊಡ್ಡದಾಗಿದೆ; ದಪ್ಪನಾಗಿದೆ. ಆದರೂ ಅದು ಕೈ ಎನ್ನುವುದರಲ್ಲಿ ಸಂದೇಹವಿಲ್ಲ ಬುದ್ಧಿ. ಬಲಗೈ, ಬುದ್ಧಿ!" ಎಂದು ಕರಿಯ ಮತ್ತೆ ಹೇಳಿದ. "ಸರಿ! ಹೇಗಾದರೂ ಆಗಲಿ! ಅದು ಅಲ್ಲಿಗೆ ಹೇಗೆ ಬಂತು? ನಿನ್ನನ್ನು ಇಲ್ಲಿ ಕಾವಲಾಗಿ ಇರಿಸಿರು

ವುದು ಏತಕ್ಕೆ? ಹೋಗಿ ಅಲ್ಲಿಂದ ಅದನ್ನು ತೆಗೆದುಬಿಡು" ಎಂದು ಮೊಲವು ಆಜ್ಞಾಪಿಸಿತು.

ಇದಾದ ಬಹಳ ಹೊತ್ತಿನತನಕ ಮಾತೇ ಇಲ್ಲ....ಅನಂತರ ಕೆಲವು ಪ್ರಾಣಿಗಳು ಒಟ್ಟಿಗೆ ಸೇರಿ ಏನೋ ಪಿತೂರಿ ನಡೆಸುತ್ತಿರಬೇಕೆಂದು ಪಾಪಚ್ಚಿ ಊಹಿಸಿದಳು; ಯಾಕೆಂದರೆ ಗುಜು ಗುಜು ಸದ್ದು ಮಾತ್ರ ಕೇಳಿಸುತ್ತಿತ್ತು. ಕ್ರಮೇಣ ಅವರ ಮಾತು ಸ್ಪಷ್ಟವಾಗುತ್ತಾ ಬಂತು. ಅಲ್ಲಲ್ಲಿ ಕೆಲವು ಮಾತುಗಳು ಮಾತ್ರ ಪಾಪಚ್ಚಿಯ ಕಿವಿಯನ್ನು ಮುಟ್ಟಿದುವು. "ನನ್ನ ಕೈಲಾಗುವುದಿಲ್ಲ, ಅಬ್ಬಬ್ಬಾ" "ಲೋ, ಹೇಡಿ, ಹೇಳಿದ ಹಾಗೆ ಕೇಳೋ" "ಹತ್ತು, ಗೋಡೆಯ ಮೇಲೆ" "ಚಾಕು ತೆಗೆದುಕೊಂಡು ಹೋಗು".. ....ಪಾಪಚ್ಚಿ ಇನ್ನೊಂದುಸಲ ಕೈಯನ್ನು ಬೀಸಿದಳು....ಈಸಲ ಎರಡು ಆರ್ತಧ್ವನಿಗಳು...."ಅಯ್ಯೋ!"...."ಅಯ್ಯೋ!".... ಅಷ್ಟೆ. ಇಬ್ಬರು ಕೆಳಗೆ ಬಿದ್ದ ಸದ್ದು. ಮೊದಲಿಗಿಂತ ಹೆಚ್ಚು ಅನಾಹುತ.

ಅನಂತರ ಒಂದು ಗಾಡಿ ತುಂಬ ಪ್ರಾಣಿಗಳು ಮನೆಯ ಗೋಡೆಯ ಹತ್ತಿರವೇ ಬಂದು ಇಳಿದ ಹಾಗೆ ಗದ್ದಲವಾಯಿತು. ಅವರೆಲ್ಲರೂ ಏನೇನೋ ಬಹಳ ಹೊತ್ತು ಪಿಸುಗುಟ್ಟುತ್ತಿದ್ದರು....ಆಮೇಲೆ ಗಲಾಟೆ. ಜಗಳ. "ಇನ್ನೊಂದು ಏಣಿ ಇಲ್ಲವ್ರೋ?" "ಇಲ್ಲಿಗೆ ಎರಡು ಇಟ್ಟಿಗೆ ತೆಗೆದು ಕೊಂಡು ಬಾ." "ಹಗ್ಗ ಸಾಲದು" "ಸಣ್ಣಪ್ಪ ತರುತ್ತಾ ಇದಾನೆ" "ಬೇಡ, ಬೇಡ, ಕೆಳಗಿರಿಸಬೇಡ" "ಇನ್ನೊಂದು ಏಣಿ ಎಲ್ಲೋ" "ಇಲ್ಲಿ ತಾ, ಮಗೂ" "ಸಣ್ಣಪ್ಪಾ, ನೀನೇ ಗತಿಯಪ್ಪಾ" "ನನಗೆ ಹೇಳಿದ್ದು ಒಂದೇ ಏಣಿ" "ಎಲ್ಲಿಂದ ವಕ್ರಿಸಿತು ಈ ಪಿಶಾಚಿ" "ಆ ಮೂಲೆಯಲ್ಲಿ ಮಡಗು" "ಕಿಟಿಕಿ ಮಟ್ಟಕ್ಕೆ ಬರುತ್ತೋ" "ಸಣ್ಣಪ್ಪಾ, ಬುದ್ಧಿಯವರು ಇನಾಮು ಕೊಡುತ್ತಾರೆ" "ಹೆಂಚು ಬೀಳುತ್ತಾ ಇದೆ, ಕುಳ್ಳಯ್ಯಾ" "ಓಡು, ಓಡು" "ಎರಡು ಏಣಿಗಳನ್ನೂ ಒಟ್ಟಿಗೆ ಕಟ್ಟು" ....ಹೀಗೆ.

"ಓಹೋ! ಸಣ್ಣಪ್ಪ ಎನ್ನುವವನು ಏಣಿಯ ಮೇಲೆ ಕಿಟಿಕಿಯ ತನಕ ಹತ್ತಿಬಂದು ಒಳಗೆ ನೋಡುತ್ತಾನೋ, ಏನೋ? ನನ್ನ ಕೈ ಕತ್ತರಿಸಿ ಬಿಡುತ್ತಾನೋ•ಏನೋ? ಇರಲಿ! ಬರಲಿ!" ಎಂದು ಪಾಪಚ್ಚಿ ಕೈಯನ್ನು

ತದಷ್ಟು ಒಳಕ್ಕೆಳೆದುಕೊಂಡು ಸಿದ್ಧಳಾದಳು. ಗೋಡೆಯ ಮೇಲೆ ಕರಕರ ಸದ್ದಾಯಿತು. ಸುಮ್ಮನಿದ್ದಳು. ಕಿಟಿಕಿಯ ಹತ್ತಿರ ಹೊರಗಡೆ ಯಾವುದೋ ಒಂದು ಪ್ರಾಣಿ ಬಂದಹಾಗಾಯಿತು. ಆಗ, "ಇಗೋ, ಸಣ್ಣಪ್ಪನ ಗತಿ ಪೂರೈಸಿತು" ಎಂದು ಹೇಳುತ್ತಾ ಕೈಯನ್ನು ಬೀಸಿದಳು.

"ಅಯ್ಯೋ!" "ಸಣ್ಣಪ್ಪ ಬಿದ್ದ" ಎಂದು ಹತ್ತಾರು ಪ್ರಾಣಿಗಳು ಒಂದಾಗಿ ಕಿರಿಚಿಕೊಂಡುವು. ಆಮೇಲೆ ಕೊಂಚ ಹೊತ್ತು ಮೌನ.... ನುತ್ತೆ ಗಲಾಟೆ. "ತಲೆ ಸ್ವಲ್ಪ ಎತ್ತಿ ಹಿಡಿ....ಹಾಗೆ....ನೀರು ಚಿಮುಕಿಸು....ಗಾಳಿ ಬೀಸು....ದೂರ ಸರಿಯಿರಿ....ಉಸಿರಾಡಲಿ ಸಾಪ! ಕರಿಯ, ಹಿಂದಕ್ಕೆ ಬಾ....ಸಣ್ಣಪ್ಪಾ, ಸಣ್ಣಪ್ಪಾ....ಸುದಾರಿ ಸಿಕೋ....ಕೂತುಕೋ, ಒಳಗಡೆ ಇರುವುದು ಏನು, ಹೇಳೋ ಬೇಗ" "ಬಗುಳೋ ಗಟ್ಟಿಯಾಗಿ" "ಹೇಳೋ ನಿದಾನವಾಗಿ" "ಬಾಯಿ ಬಿಡೋ"....ಹೀಗೆ ಪ್ರಾಣಿಗಳು ಒಂದಾದ ಮೇಲೊಂದು ಹೇಳ ತೊಡಗಿದುವು.

"ನಾನು ಯಾವುದನ್ನೂ ಖಂಡಿತವಾಗಿ ಹೇಳಲಾರೆ....ನನಗೆ ತಿಳಿದದ್ದಿಷ್ಟು; ದೊಡ್ಡದೊಂದು ಒನಕೆ ಒಳಗಿನಿಂದ ಬಂತು....ಬೀಸಿತು ....ನಾನು ಮೇಲಕ್ಕೆ ಹಾರಿದೆ. ಕೆಳಕ್ಕೆ ಬಿದ್ದೆ....ಬೆನ್ನು ಮೂಳೆ ಮುರಿದಿದೆಯೋ, ಏನೋ?" ಎಂದು ಸಣ್ಣಪ್ಪ ಹೇಳಿದ. "ಸದ್ಯಃ ಉಳಿದುಕೊಂಡೆಯಲ್ಲಾ, ನಿನ್ನ ಕೈಹಿಡಿದವಳ ತಾಳಿ ಗಟ್ಟಿಯಾಗಿತ್ತು" ಎಂದು ಮುದುಕರೊಬ್ಬರು ಹೇಳಿದರು.

ಆಮೇಲೆ ಕೊಂಚ ಹೊತ್ತು ಸದ್ದೇ ಇಲ್ಲ. ಕೊನೆಗೆ, ಮೊಲದ ಅಧಿಕಾರವಾಣಿ,—"ಮನೆಗೆ ಬೆಂಕಿ ಇಟ್ಟುಬಿಡಿ. ನನ್ನ ಬಂಗಲಿ ಸುಟ್ಟು ಬೂದಿಯಾಗಲಿ, ಚಿಂತೆಯಿಲ್ಲ. ಆದದ್ದಾಗಲಿ, ಅನಿಷ್ಟ ತೊಲಗಲಿ." ಸಾಪಚ್ಚಿಗೆ ಭಯವಾಯಿತು. "ಹಾಗೇನಾದರೂ ಮಾಡಿದರೆ, ಪಿಲ್ಲಿಯನ್ನು ಛೂ ಬಿಡುತ್ತೇನೆ!" ಎಂದು ಗರ್ಜಿಸಿದಳು....ಹೊರಗಡೆ ಮಾತು ನಿಂತಿತು. ಯಾವ ಪ್ರಾಣಿಯ ಕಿಚಿಪಿಚಿಯೂ ಇಲ್ಲ.

"ಮುಂದೆ ಇನ್ನೇನು ಯೋಚಿಸುತ್ತಾರೋ?" ಎಂದು ಪಾಪಚ್ಚಿ ಚಿಂತಿಸಿದಳು. ಎರಡು ಮೂರು ನಿಮಿಷಗಳು ಹಾಗೆಯೇ ಕಳೆದು

ಹೋಯಿತು. ಅನಂತರ ಮೊಲ ಯಾರನ್ನೋ ಹತ್ತಿರ ಕರೆದು "ಎರಡು ಕುಕ್ಕೆ ತುಂಬ ಸಾಕು. ಬೇಗ ತೆಗೆದುಕೊಂಡು ಓಡಿಬಾ" ಎಂದು ಹೇಳಿತು. "ಏನದು? ಎರಡು ಕುಕ್ಕೆ ತುಂಬ?" ಎಂದು ಪಾಪಚ್ಚಿ ಆಶ್ಚರ್ಯ ಪಟ್ಟಳು. ಅಷ್ಟು ಹೊತ್ತಿಗೆ ಸರಿಯಾಗಿ ಮೇಲಿನ ಹೆಂಚೊಂದನ್ನು ಯಾರೋ ತೆಗೆದಹಾಗಾಯಿತು. ಅಲ್ಲಿಂದ, ಹತ್ತು ಹನ್ನೆರಡು ಹಿಡಿ ಸಣ್ಣ ಕಲ್ಲುಗಳು ಅವಳ ಮೈಮೇಲೆ ಬಿದ್ದುವು. ಹೆಚ್ಚು ನೋವಾಗಲಿಲ್ಲ. ಆದರೂ, ಕೋಪಬಂತು. "ಓಹೋ! ಈ ಕುಚೇಷ್ಟೆಯನ್ನು ನಾನು ನಿಲ್ಲಿಸುತ್ತೇನೆ" ಎಂದು ಯೋಚಿಸಿ, "ಬೇಡಿ! ಇಂಥಾ ಕೆಲಸವನ್ನು ಇನ್ನೊಂದುಸಲ ಮಾಡಬೇಡಿ. ಅನ್ಯಾಯವಾಗಿ ಹಾಳಾಗಬೇಡಿ!" ಎಂದು ಪಾಪಚ್ಚಿ ಕೂಗಿದಳು. ಮತ್ತೆ ಸದ್ದಡಗಿತು. ಯಾರ ಓಡಾಟವೂ ಇಲ್ಲ. ಆದರೆ ಒಂದು ದೊಡ್ಡ ಗುಂಪು ದೂರದಲ್ಲಿ ಸೇರಿತ್ತೆಂದು ಪಾಪಚ್ಚಿಗೆ ಗೊತ್ತಾಯಿತು. ಏಕೆಂದರೆ ಪಿಸುಗುಟ್ಟುವುದು ಮಾತ್ರ ದೂರದಿಂದ ಕೇಳಿ ಬರುತ್ತಿತ್ತು.

ಒಳಗೆ ಬಿದ್ದ ಕಲ್ಲುಗಳು ಕಲ್ಲುಗಳೇ ಅಲ್ಲ! ಅವು ಸಕ್ಕರೆ ಬಾದಾಮಿ ಹಣ್ಣುಗಳು. "ಪಾಪ! ಈ ಊರಲ್ಲಿ ಕಲ್ಲೇ ಸಿಕ್ಕುವುದಿಲ್ಲವೋ ಏನೋ? ಚೆನ್ನಾಯಿತು.... ಹಸಿವಿನ ಹೊತ್ತಿಗೆ ಸರಿಯಾಗಿ ಯಾರನ್ನಾದರೂ ರೇಗಿಸಿದರೆ ಸಾಕು.... ಅವರು ನಮ್ಮ ಮೇಲೆ ಎಸೆಯುವ ಬಾದಾಮಿ ಹಣ್ಣನ್ನು ತಿಂದು ಸುಖವಾಗಿರಬಹುದು. ಇದು ಒಳ್ಳೆಯ ಉಪಾಯ!.... ಇರಲಿ .... ಇದನ್ನು ತಿನ್ನಬಹುದೋ? .... ತಿಂದರೇನು? ಏನಾದರೂ ಮಾರ್ಪಾಡಾಗಬಹುದು, ಅಲ್ಲವೆ? ಆಗಲಿ" ಎಂದು ಹೇಳುತ್ತಾ ಕೊಂಚ ತಿಂದಳು.

ಹೌದು. ಪಾಪಚ್ಚಿಯ ಊಹೆ ತಪ್ಪಾಗಲಿಲ್ಲ. ಪಾತಾಳದಲ್ಲಿ ಯಾವುದನ್ನು ತಿಂದರೂ ಒಂದು ವಿಚಿತ್ರವಾದ ಬದಲಾವಣೆ ಆಗಿಯೇ ಆಗುತ್ತದೆ.... ಎಂತಹ ಶಕ್ತಿ.... ಪಾಪಚ್ಚಿ ಮತ್ತೆ ಚಿಕ್ಕ ಹುಡುಗಿಯಾದಳು.... ಒಂದು ಬೀಗದ ಕೈಯಷ್ಟು ಸಣ್ಣವಳಾದಳು.

"ಇದೇ ಸಮಯ" ಎಂದು ಹೇಳುತ್ತಾ, ಬಾಗಿಲ ಸಂದಿನಿಂದ ನುಸುಳಿದಳು. ಹೊರಗಿನ ಮೆಟ್ಟಲುಗಳ ಮೇಲೆ ಜಾರಿಕೊಂಡು ಕೆಳಗೆ

ಸಿದ್ದಳು. ಕೈಕಾಲು ಮುರಿಯದೆ ಹೇಗೋ ಮೊಲದ ಬಂಗಲಿಯಿಂದ ಹೊರಗೆ ಬಂದಳು. ಅಲ್ಲಿ ಅಂಗಳದಲ್ಲಿ ಅವಳ ಹಿಂದಿನ ಆಕಾರ, ಗರ್ಜನೆ ಇವುಗಳನ್ನೇ ಚರ್ಚಿಸುತ್ತಿದ್ದ ದೊಡ್ಡ ಸಭೆ ಸೇರಿದಿತ್ತು. ಸಭಾ ಮಧ್ಯದಲ್ಲಿ ಒಂದು ಹಲ್ಲಿಯನ್ನು (ಅದೇ ಅತಿ ಸಾಹಸಿಯಾದ ಸಣ್ಣಪ್ಪ) ಒಂದು ಬೆಂಚಿನ ಮೇಲೆ ಮಲಗಿಸಿದ್ದರು. ಎರಡು ಹಲ್ಲಿಯ ಮರಿಗಳು ಎರಡು ಪಕ್ಕಗಳಲ್ಲಿಯೂ ಕುಳಿತು ಸಣ್ಣಪ್ಪನ ಕೈಕಾಲುಗಳನ್ನು ಎಳೆದು, ಮಡಿಸಿ, ಅವುಗಳಿಗೆ ಎಣ್ಣೆ ತಿಕ್ಕುತ್ತಿದ್ದುವು. ಮೊಲ ಒಂದು ಚಮಚದಿಂದ ಹಲ್ಲಿಗೆ ಕಷಾಯವನ್ನು ಕುಡಿಸುತ್ತಿತ್ತು. ಅವಳಿಗೆ ಆಗ "ಅಯ್ಯೋ! ಪಾಪ" ಎನಿಸಿತು.

ಆ ಸಭೆಯ ಅಂಚಿನಲ್ಲಿಯೇ ಕುಳಿತು ಮಾವಿನಹಣ್ಣನ್ನು ತಿನ್ನುತ್ತಿದ್ದ ಒಂದು ಅಳಿಲು ಮರಿ ಆವಳನ್ನು ಕಂಡು ಕಿಚು ಕಿಚೆಂದು ಕಿರಿಚಿತು. ಎಲ್ಲರೂ ಅವಳ ಕಡೆ ತಿರುಗಿನೋಡಿದರು. ಕೆಲವರು ಬೆನ್ನಟ್ಟಿ ಬಂದರು. ಆದರೂ, ಪಾಪಚ್ಚಿ ಸರಸರನೆ ಓಡಿ ಅಲ್ಲಿದ್ದ ಒಂದು ಹುಲ್ಲಿನ ಪೊದೆಯೊಳಗೆ ಸೇರಿ ಕೊಂಡಳು.

ಅವಳನ್ನು ಅಲ್ಲೆಲ್ಲಾ ಹುಡುಕಿ ಬೇಜಾರಾಗಿ ಪ್ರಾಣಿಗಳು ಮತ್ತೆ ಸಭೆ ಸೇರಿ ಸುಮ್ಮನಾದುವು.

---

## ಹಸುರು ಹುಳು

ಹುಲ್ಲಿನ ಪೊದೆಯಿಂದ ಪಾಪಚ್ಚಿ ಮೆಲ್ಲಮೆಲ್ಲನೆ ಹೊರಗೆ ಬಂದು ಬಂಗಲಿಗೆ ದೂರದೂರವಾಗಿ ನಡೆದು ಅಲ್ಲಿದ್ದ ಒಂದು ತೋಟದ ಹತ್ತಿರಕ್ಕೆ ಬಂದಳು. "ಅಬ್ಬಾ! ಎಂಥಾ ಅನಾಹುತವನ್ನು ತಪ್ಪಿಸಿಕೊಂಡು ಬಂದ ಹಾಗಾಯಿತು! ಅವರು ಮನೆಗೆ ಬೆಂಕಿ ಇಟ್ಟಿದ್ದರೆ ನನ್ನ ಗತಿ ಏನಾಗು ತ್ತಿತ್ತೋ?" ಎಂದು ಯೋಚಿಸಿ ಸಮಾಧಾನಪಟ್ಟಳು. "ಇನ್ನು ಮೇಲೆ ಮಾಡಬೇಕಾದ ಕೆಲಸಗಳೆರಡು. ಒಂದನೆಯದು, ನನ್ನ ನಿಜವಾದ ಗಾತ್ರ ವನ್ನು ಸಂಪಾದಿಸುವುದು; ಎರಡನೆಯದು, ಆ ಉದ್ಯಾನವನ್ನು ಪ್ರವೇಶಿ ಸುವುದು. ಇಷ್ಟು ಹೊತ್ತು ಇಲ್ಲಿ ಒದ್ದಾಡಿದ ಮೇಲೆ, ಇಷ್ಟು ಕಷ್ಟ

ಗಳನ್ನನುಭವಿಸಿದ ಮೇಲೆ ಆ ತೋಟವನ್ನು ನೋಡದೆ ಹಿಂದಿರುಗುವುದು ಸರಿಯಲ್ಲ. ಹಾಗೆಯೇ ಹೋದರೆ ಎಂದೆಂದಿಗೂ ಆ ಕೊರತೆ ಒಳಗೇ ಚುಚ್ಚುತ್ತಿರುತ್ತದೆ" ಎಂದು ಅವಳು ತನಗೆ ತಾನೇ ಹೇಳಿಕೊಂಡಳು.

ಪಾಪಚ್ಚಿಯ ತೀರ್ಮಾನವು ಬಹಳ ಶ್ಲಾಘನೀಯವಾದದ್ದೇ. ನಾವೂ ಪಾಪಚ್ಚಿಯ ಸ್ಥಾನದಲ್ಲಿದ್ದಿದ್ದರೆ ನಮಗೂ ಹಾಗೆಯೇ ಅನ್ನಿಸುವುದು. ಆದರೆ, ಮಾಡಬೇಕಾದ ಉಪಾಯವೇನು? ಅದು ಮಾತ್ರ ಅವಳಿಗೆ ತಿಳಿಯದು. ಒಟ್ಟಿನಲ್ಲಿ ಒಂದನ್ನು ಮಾತ್ರ ಹೇಳಬಹುದು. ಯಾವುದನ್ನಾದರೂ ತಿನ್ನಬೇಕು, ಅಥವಾ, ಕುಡಿಯಬೇಕು. ಆದರೆ, ಯಾವುದನ್ನ ಎನ್ನುವುದೇ ಅವಳಿಗೆ ಬಗೆಹರಿಯಲಿಲ್ಲ.

ಏನು ಮಾಡಬೇಕೆಂದು ತೋಚದೆ ಅವಳು ಅತ್ತಿತ್ತ ಹುಚ್ಚಳಂತೆ ಅಲೆಯುತ್ತಿದ್ದಳು. ಪ್ರತಿಯೊಂದು ಹೂವನ್ನೂ ಹುಲ್ಲನ್ನೂ ನಿಧಾನವಾಗಿ ಪರೀಕ್ಷಿಸುತ್ತಲೇ ಮುಂದೆ ನಡೆದಳು. ಆದರೆ, ಅವುಗಳಲ್ಲೊಂದರಲ್ಲಿಯೂ ಯಾವ ಅತಿಶಯವಾದ ಶಕ್ತಿಯೂ ಇದ್ದ ಹಾಗೆ ಅವಳಿಗೆ ಕಾಣಿಸಲಿಲ್ಲ. ತಿನ್ನಿರಿ, ಕುಡಿಯಿರಿ, ಎಂದು ಒಂದರ ಮೇಲೂ ಬರೆದಿರಲಿಲ್ಲ.

ಹೀಗೆ ಮುಂದು ಮುಂದಕ್ಕೆ ಹೆಜ್ಜೆಯಿಡುತ್ತಿರಲು . . . . ಅಲ್ಲಿ, ಒಂದು ಅಣಬೆ. ಪಾಪಚ್ಚಿಗಿಂತ ಕೊಂಚ ಎತ್ತರವಾಗಿ, ಕೆಂಪಗೆ ದಪ್ಪವಾಗಿ ಬೆಳೆದಿತ್ತು ಆ ಅಣಬೆ. ಅದನ್ನೊಂದು ಸಾರಿ ಬಳಸಿ ಬಂದು ಅದರ ಮೇಲುಭಾಗದಲ್ಲಿ ಏನಿರಬಹುದೆಂದು ನೋಡುವುದಕ್ಕಾಗಿ ತುದಿಗಾಲಿನಲ್ಲಿ ನಿಂತಳು.

ಅಲ್ಲಿ ಒಂದು ಹಸುರು ಹುಳು. ಕಣ್ಣು ಮುಚ್ಚಿಕೊಂಡು ಗುಡಿಗುಡಿ ಸೇದುತ್ತಾ, ಅದರ ಸೇವನೆಯಿಂದ ಮತ್ತು ತಲೆಗೇರಿದ್ದದ್ದರಿಂದ ಆನಂದದಲ್ಲಿ ಮುಳುಗಿ ಮೌನವಾಗಿ ಕುಳಿತಿತ್ತು. ಬಾಯಿಂದ ಹೊರಟ ಹೊಗೆ ಸುರುಳಿ ಸುರುಳಿಯಾಗಿ ಆಕಾಶಕ್ಕೆ ಏರುತ್ತಿತ್ತು. ಪಾಪಚ್ಚಿಗೆ ಆಶ್ಚರ್ಯವಾಯಿತು. ಗುಡಿಗುಡಿಯನ್ನು ಅವಳು ನೋಡಿದ್ದು ಅಂದೇ ಮೊದಲು. ಶಾಮುವಿನ ಚರಿತ್ರೆ ಪುಸ್ತಕದಲ್ಲಿ ಕೆಲವು ಮುಸಲ್ಮಾನ್ ದೊರೆಗಳು ಗುಡಿಗುಡಿ ಸೇದುವ ಚಿತ್ರಗಳಿದ್ದುವು. ಹಸುರು ಹುಳುವಿನ ತಲೆಯ ಮೇಲೂ ಆ ಚಿತ್ರಗಳಲ್ಲಿರುವಂತೆಯೇ ರುಮಾಲು, ಮುತ್ತಿನ ಸರ, ಶಿರ್ಪೇಷ್ ಮುಂತಾದವುಗಳಿದ್ದುವು.



"ಅಲ್ಲಿ ಒಂದು ಹಸುರು ಹುಳು. ಕಣ್ಣು ಮುಚ್ಚಿಕೊಂಡು ಗುಡಿಗುಡಿ ಸೇದುತ್ತಾ,....ಆನಂದದಲ್ಲಿ ಮುಳುಗಿ ಮೌನವಾಗಿ ಕುಳಿತಿತ್ತು."

ಪಾಪಚ್ಚಿ ಆ ಹುಳುವನ್ನು ಎವೆ ಮುಚ್ಚದೆ ನೋಡಿದಳು. ಹುಳುವೂ ಅವಳನ್ನು ದಿಟ್ಟಿಸಿ ನೋಡಿತು. ಕಡೆಗೆ ಗುಡಿಗುಡಿಯನ್ನು ಬಾಯಿಂದ ನಿಧಾನವಾಗಿ ತೆಗೆದು ಅಣಬೆಯ ಮೇಲೆ ಇರಿಸಿ, "ಯಾರು?" ಎಂದು ಕೇಳಿತು.

ಅದರ ಸೋಮಾರಿತನವನ್ನೂ ಅಸಡ್ಡೆಯನ್ನೂ ಕಂಡು ಪಾಪಚ್ಚಿಗೆ ನಗು ಬಂತು. "ಬಾಯಿಬಿಡುವುದೇ ಇಷ್ಟು ಲಕ್ಷಣವಾದರೆ, ಈ ಮಹಾರಾಯನೊಂದಿಗೆ ಮಾತು ಕಥೆ ಹೇಗೆ ಆಡುವುದು?" ಎಂದು ಅವಳು ಯೋಚಿಸಿದಳು. "ಯಾರು?" ಎಂದು ಇನ್ನೊಂದುಸಾರಿ ಹುಳು ಕೇಳಿತು. "ನಾನು ಯಾರು ಎಂದು ನನಗೇ ಇನ್ನೂ ಸರಿಯಾಗಿ ಗೊತ್ತಿಲ್ಲ. ಬೆಳಗ್ಗೆ ನಾನು ಹಾಸಿಗೆಯಿಂದೆದ್ದಾಗ ಯಾರಾಗಿದ್ದೆ ಎಂಬುದನ್ನು ಮಾತ್ರ ಬಲ್ಲೆ" ಎಂದು ಪಾಪಚ್ಚಿ ಹೇಳಿದಳು. ಹುಳುವಿಗೆ ಇದು ಅರ್ಥವಾಗಲಿಲ್ಲ. ಅದಕ್ಕೆ ಕೊಂಚ ಕೋಪಬಂದಿರಬೇಕು. ಏಕೆಂದರೆ, ಅದು "ಹಾಗೆಂದರೇನು? ವಿಶದವಾಗಿ ಸ್ಫುಟಪಡಿಸು" ಎಂದು ಕೇಳಿತು.

"ಇದಕ್ಕಿಂತ ಸ್ಪಷ್ಟವಾಗಿ ಹೇಳಲು ನನ್ನಿಂದ ಸಾಧ್ಯವಿಲ್ಲ. ಏಕೆಂದರೆ, ನೋಡಿ....ಇವತ್ತು ಬೆಳಗ್ಗಿನಿಂದ ನಾನು ನಾನೇ ಅಲ್ಲ. ಇದಕ್ಕಿಂತ ಸ್ಪಷ್ಟವಾಗಿ ಹೇಳುವುದಕ್ಕೆ ನನಗೆ ಬರದು....ಒಂದೇ ದಿನದಲ್ಲಿ ಇಷ್ಟು ಆಕಾರ, ಅವತಾರ ಬದಲಾಯಿಸಿದರೆ ಎಂಥವರಿಗೂ ತಲೆಗೆ ಮಂಕು ಕವಿದು ಹೋಗುತ್ತೆ" ಎಂದು ಪಾಪಚ್ಚಿ ಹೇಳಿದಳು.

ಹುಳುವಿಗೆ ಅವಳ ಮಾತಿನಲ್ಲಿ ತುಂಬಾ ಅಪನಂಬಿಕೆ, ಬೇಸರಿಕೆ. ಅದು ಕೊಂಚ ಕೋಪಿಸಿ "ಕವಿಯುವುದಿಲ್ಲ" ಎಂದು ಹೇಳಿತು. "ಇರಲಿ. ನಾಳೆ ನೀವೂ ಕೂಡ ಒಂದು ದಾರದ ಗೂಡಿನೊಳಗೆ ಸೇರಿ ಕದಹಾಕಿಕೊಂಡು ಒಂದು ವಾರವೋ ಎರಡು ವಾರವೋ ಸತ್ತ ಹಾಗೆ ಬಿದ್ದಿದ್ದು ಚಿಟ್ಟೆಯಂತೆ ಆಕಾರ ಬದಲಾಯಿಸಿ ಹೊರಗೆ ಬರುವಾಗ ನಿಮಗೂ ಕೊಂಚ ಹೇಗೆ ಹೇಗೋ ಆಗುತ್ತೆ, ನೋಡುತ್ತೀರಿ" ಎಂದು ಪಾಪಚ್ಚಿ ಬಿಸಿಬಿಸಿಯಾಗಿ ಎರಡು ಮಾತನ್ನಾಡಿದಳು. "ಆಗುವುದಿಲ್ಲ" ಎಂದು ಹುಳು ಹಠಹಿಡಿಯಿತು.

ಆ ಹುಳುವಿಗೆ ಏನು ದುರಹಂಕಾರ! ಏತಿ ಅಂದರೆ ಪ್ರೇತಿ! ಕೊಂಚವೂ ಮಾತಿನಲ್ಲಿ ನಯವಿಲ್ಲ, ಮರ್ಯಾದೆಯಿಲ್ಲ. ಬಾಯಿಂದ ಮುತ್ತುಗಳು

ಉದುರಿಹೋಗಬಹುದೆಂಬ ಭಯದಿಂದಲೋ ಏನೋ, ಒಂದೆರಡು ಮಾತಿಗಿಂತ ಹೆಚ್ಚಾಗಿ ಆಡುತ್ತಲೇ ಇರಲಿಲ್ಲ. ಪಾಪಚ್ಚಿಗೆ ರೇಗಿತು. "ನಿಮಗೆಲ್ಲಾ ನಮ್ಮಹಾಗಲ್ಲವೋ, ಏನೋ? ನನಗೇನೋ ಹಾಗೆಯೇ" ಎಂದು ಹೇಳಿದಳು. "**ನನಗೆ** ಎಂದು ಹೇಳಿದೆಯಲ್ಲಾ! ನೀನು ಯಾರು?" ಎಂದು ಹುಳು ಹಳೆಯ ಪ್ರಶ್ನೆಯನ್ನೇ ಪುನಃ ಕೇಳಿತು.

ಪಾಪಚ್ಚಿಗೆ ಏನು ಹೇಳಬೇಕೆನ್ನುವುದು ತೋಚಲೇ ಇಲ್ಲ. ಕಡೆಗೆ, "ಅದಿರಲಿ! ನೀವು ಯಾರು ಅಂತ ಮೊದಲು ಅಪ್ಪಣೆಯಾಗಲಿ!" ಎಂದು ಕೇಳಿದಳು. ಹುಳು ಮತ್ತೆ ಗುಡಿಗುಡಿಯನ್ನು ತೆಗೆದುಕೊಂಡು ಬಾಯಲ್ಲಿಟ್ಟು ಸೇದುತ್ತಾ ಹೊಗೆ ಬಿಡುತ್ತಾ "ಯಾಕೆ ಹೇಳಬೇಕು?" ಎಂದು ಕಣ್ಣು ಮುಚ್ಚಿಕೊಂಡು ಉತ್ತರಕೊಟ್ಟಿತು. "ಈ ದರಿದ್ರ ಪ್ರಾಣಿಗೆ ಇವತ್ತು ಬುದ್ಧಿ ನೆಟ್ಟಗಿಲ್ಲ. ಇದರೊಂದಿಗೆ ಯಾಕೆ ಸುಮ್ಮನೆ ಮಾತು? ಇನ್ನೆಲ್ಲಿಗಾದರೂ ಹೋಗೋಣ" ಎಂದು ಪಾಪಚ್ಚಿ ಮುನಿಸಿಕೊಂಡು ಹೊರಟಳು. —"ಬಾ, ಅಮ್ಮ! ಹಿಂದಕ್ಕೆ ಬಾ. ಎಲ್ಲಿಗೆ ಓಡುತ್ತೀಯೆ? ಮುಖ್ಯವಾದ ಒಂದು ವಿಷಯ ಹೇಳುವುದಕ್ಕಿದೆ" ಎಂದು ಹುಳು ಅವಳನ್ನು ಕರೆಯಿತು. ಪಾಪಚ್ಚಿಗೆ ಅರ್ಧ ಕೋಪ, ಅರ್ಧ ಆಸೆ. ಅವಳು ಹಿಂದಿರುಗಿದಳು. "ಕೋಪ ಬಲು ಕೆಟ್ಟದ್ದು. ಅತ್ತೆಯ ಮನೆಗೆ ಹೋಗಿ ಒಳ್ಳೆಯವಳೆಂದು ಹೆಸರು ಪಡೆಯಬೇಕಾದರೆ ಈಗಲಿಂದಲೇ ಕೋಪವನ್ನು ಬಿಟ್ಟುಬಿಡಬೇಕು" ಎಂದು ಹುಳು ಪ್ರಾರಂಭಿಸಿತು. "ಈ ಕಗ್ಗ ಕೇಳಿದೇನೆ" ಎಂದು ಪಾಪಚ್ಚಿ ತನಗೆ ತಾನೇ ಹೇಳಿಕೊಂಡು, ಬಂದ ಕೋಪವನ್ನು ನುಂಗಿಕೊಂಡಳು. ಗುಡಿಗುಡಿಯಿಂದ ಹೊಗೆ ಎಳೆಯುತ್ತಾ ಹುಳು ಹಾಗೆಯೇ ಎಂಟು ಹತ್ತು ನಿಮಿಷಗಳ ಕಾಲ ತೆಪ್ಪಗಿತ್ತು. ಅನಂತರ "ಬೆಳಗಿನಿಂದ ನಿನಗೆ ಏನೇನಾಯಿತು, ಹೇಳು" ಎಂದು ಕೇಳಿತು.

ತನ್ನ ಗೋಳನ್ನು ಹೇಳಿಕೊಳ್ಳಲು ಇಲ್ಲಿ ಒಬ್ಬನಾದರೂ ಸಿಕ್ಕಿದನಲ್ಲಾ ಎಂದು ಪಾಪಚ್ಚಿಗೆ ಬಹಳ ಸಂತೋಷವಾಯಿತು. "ನಾನು ಈಗ ಯಾರೋ ಆಗಿಬಿಟ್ಟಿದೇನೆ. ಯಾರು ಎಂದು ನನಗೆ ತಿಳಿಯದು. ನಿನ್ನೆಯ ಸಾಯಂಕಾಲದತನಕ ಬಾಯಿಗೆ ಬರುತ್ತಿದ್ದ ಪಾಠಗಳಲ್ಲಿ ಒಂದೂ ಈಗ ಸರಿಯಾಗಿ

ನೆನಪಿನಲ್ಲಿಲ್ಲ. ಘಳಿಗೆಗೊಂದು ಆಕಾರ. ಕಾಲಿಟ್ಟ ಕಡೆ ಅನಾಹುತ. ಹೀಗಾಗುತ್ತಿದೆ" ಎಂದು ಪಾಪಚ್ಚಿ ವ್ಯಸನದಿಂದ ಹೇಳಿದಳು.

"ಇರಲಿ! ಯಾವ ಯಾವುದು ಮರೆತುಹೋಗಿದೆ?" ಎಂದು ಹುಳು ವಿಚಾರಿಸಿತು. "'ಒಂದೂ ಎರಡು' ಎಂಬ ಪದ್ಯ ಹೇಳಿನೋಡಿದೆ. ತಪ್ಪು ತಪ್ಪಾಗಿ ಬಂತು." "ಚಿಂತೆ ಇಲ್ಲ! ಗೋವಿನ ಹಾಡು ಹೇಳು, ನೋಡೋಣ" ಎಂದು ಹುಳು ಅಪ್ಪಣೆಮಾಡಿತು.

ಪಾಪಚ್ಚಿ ಕೈಕಟ್ಟಿಕೊಂಡು ಎದ್ದು ನಿಂತು ಹೇಳತೊಡಗಿದಳು.

ಧರಣಿ ಮಂಡಲ ಮಧ್ಯದೊಳಗೆ
ಮೆರೆಯುತಿಹ ಕರ್ಣಾಟ ದೇಶದಿ
ಕರಿಯ ಮಾಳಿಗನೆಂಬ ತಾತನ
ಪರಿಯ ನಾನೆಂತು ಪೇಳ್ವೆನು!

ಕಲ್ಲುಸಕ್ಕರೆ ಮಡಿಲೊಳಿಟ್ಟು
ಗೊಲ್ಲ ಹುಡುಗರು ಕಾಣದಂತೆ
ಮೆಲ್ಲ ಮೆಲ್ಲನೆ ಸುಂಗಿಬಿಡುತ
ಅಲ್ಲಿ ಮೆರೆದನರಣ್ಯದಿ.

ಉದಯಕಾಲದೊಳೆದ್ದು ತಾತನು
ಪದಗಳೆಲ್ಲವ ಹಾಡಿಕೊಂಡು
ಮುದದಿ ಹುಡುಗರನಟ್ಟಿಕೊಂಡು
ನದಿಗೆ ಹೋದನು ಈಜಲು.

ಅದುವರೆಗೂ ಸುಮ್ಮನೆ ಕೇಳುತ್ತಿದ್ದ ಹುಳು ಥಟಕ್ಕನೆ, "ಸಾಕು. ನಿಲ್ಲಿಸು. ಶುದ್ಧ ಅಸಂಬದ್ಧ" ಎಂದು ಪಾಪಚ್ಚಿಯನ್ನು ಗದರಿಸಿತು. "ಅಲ್ಲಲ್ಲಿ ಒಂದೊಂದು ತಪ್ಪಿರಬಹುದು, ಸಾರ್, ಅಷ್ಟೆ!" ಎಂದು ಅವಳು ದೈನ್ಯದಿಂದ ಹೇಳಿದಳು. ಮೇಷ್ಟರ ಮುಂದೆ ನಿಂತು ಪಾಠ ಒಪ್ಪಿಸುತ್ತಿದ್ದೇನೆಂದು ಅವಳ ಭಾವನೆ. "ಮೊದಲಿಂದ ಕೊನೆಯವರೆಗೂ ತಪ್ಪು" ಎಂದು ಹುಳು ಹೇಳಿತು. "ಇರಬಹುದು, ಸಾರ್" ಎಂದು ಪಾಪಚ್ಚಿ ಒಪ್ಪಿಕೊಂಡಳು. ಅನಂತರ ಇಬ್ಬರೂ ಕೊಂಚ ಹೊತ್ತು ಮಾತನಾಡಲೇ ಇಲ್ಲ....

ಕಡೆಗೆ ಹುಳು, "ನಿನಗೆ ಎಷ್ಟು ಎತ್ತರವಿರಬೇಕೆಂದು ಆಸೆ?" ಎಂದು ಕೇಳಿತು. "ಅಂಥ ಹಠವೇನೂ ಇಲ್ಲ ನನಗೆ. ಎಷ್ಟೇ ಎತ್ತರವಿರಲಿ ಆಗಾಗ್ಗೆ ಬದಲಾಯಿಸುತ್ತಿರಬಾರದು, ಅಷ್ಟೆ ನೋಡಿ" ಎಂದು ಪಾಪಚ್ಚಿ ಹೇಳಿದಳು. "ನೋಡುವುದಿಲ್ಲ" ಎಂದು ಹುಳು ಕೋಪದಿಂದ ಹೇಳಿತು. . . . ಪಾಪಚ್ಚಿಗೆ ಬಹಳ ರೇಗಿತು. ಏನುಮಾಡುವುದು? ಹೇಳಿದ್ದಕ್ಕೆಲ್ಲಾ ಕುತರ್ಕ, ವಿತಂಡ, ಅಡ್ಡಮಾತು!

"ಇರಲಿ! ಈಗಿರುವ ಎತ್ತರ ಸಾಕೆ?" ಎಂದು ಹುಳು ಕೇಳಿತು. ಪಾಪಚ್ಚಿ ಎಚ್ಚತ್ತಳು. ಏನೋ ಒಂದು ಉಪಾಯವನ್ನು ಹುಳು ತನಗೆ ಉಪದೇಶಮಾಡಬಹುದೆಂದು ಅವಳಿಗೆ ಆಸೆಯಾಯಿತು. "ಇನ್ನೊ ಒಂದು ಮೊಳ ಹೆಚ್ಚಾಗಿದ್ದರೆ ಮೇಲಾಗಿತ್ತು. ಈಗಿನ ಹಾಗೆ ಮೂರಂಗುಲವಿದ್ದರೆ ಎಲ್ಲರೂ ಹೀಯಾಳಿಸುತ್ತಾರೆ, ಗಿಡ್ಡಿ ಅನ್ನುತ್ತಾರೆ" ಎಂದಳು. "ಏಕೆ? ಮೂರಂಗುಲ ಸರಿಯಾದ ಎತ್ತರವಲ್ಲವೆ? ನನ್ನ ಎತ್ತರವೂ ಅಷ್ಟೆ!" ಎಂದು ಹೇಳಿ ಹುಳು ಸಟ್ಟನೆ ಅಣಬೆಯ ಮೇಲೆ ಎದ್ದು ನಿಂತುಕೊಂಡಿತು. ಹೌದು. ಅದೂ ಸರಿಯಾಗಿ ಮೂರಂಗುಲ. ಆಗ ಪಾಪಚ್ಚಿ "ನಿಮಗೆ ನಿಮ್ಮ ಎತ್ತರ ರೂಢಿಯಾಗಿದೆ. ಆದ್ದರಿಂದ, ನಿಮಗೆ ಒಪ್ಪುತ್ತೆ" ಎಂದು ಹೇಳಿದಳು. "ನಿಮಗೂ ಒಂದೆರಡು ದಿನಗಳಲ್ಲಿ ರೂಢಿಯಾಗುತ್ತೆ. ಸ್ವಲ್ಪ ತಾಳಿ" ಎಂದು ಹೇಳಿ, ಹುಳು ಗುಡಿಗುಡಿಯನ್ನು ಕೆಳಗಿರಿಸಿ, ಆಕಳಿಸಿ, ಎರಡು ಮೂರುಸಲ ಮೈಮುರಿದು ನಾಯಿಕೊಡೆಯಿಂದ ಮೆಲ್ಲಗೆ ನೆಲಕ್ಕಿಳಿದು ಸರಸರನೆ ಹೊರಟುಹೋಯಿತು. . . .

ಪಾಪಚ್ಚಿಗೆ ಆಗ ಎಷ್ಟು ವ್ಯಥೆಯಾಗಿರಬೇಕೆಂದು ನೀವೇ ಯೋಚನೆ ಮಾಡಿ! ಬೆಕ್ಕಿನ ಕೈಗೆ ಸಿಕ್ಕಿದ ಇಲಿಯ ಹಾಗೆ ಅವಳು ಇಷ್ಟು ಹೊತ್ತೂ ಒದ್ದಾಡಿದಳು. ಕಡೆಗೂ ಉಪಾಯ ಹೇಳದೆ ಹುಳು ಹೊರಟೇಹೋಯಿತು, ಶನಿ. ಅಷ್ಟರಲ್ಲಿ ಅದು ಹಿಂದಿರುಗಿತು. "ಒಂದು ಕಡೆ ತಿಂದರೆ ಬೆಳೆಯುತ್ತೆ, ಇನ್ನೊಂದು ಕಡೆ ತಿಂದರೆ ಎತ್ತರ ಕಡಮೆಯಾಗುತ್ತೆ" ಎಂದು ಹೇಳಿ, ಮತ್ತೆ ಮುಂದಕ್ಕೆ ಪ್ರಯಾಣ ಬೆಳೆಸಿತು.

"ಯಾವುದರ ಒಂದು ಕಡೆ?" ಎಂದು ಅವಳು ಯೋಚಿಸುವುದರೊಳಗೆ "ಅಣಬೆಯ ಒಂದು ಕಡೆ" ಎಂದು ಹುಳು ಉತ್ತರಹೇಳಿತು.

ಪಾಪಚ್ಚಿ ಅಣಬೆಯನ್ನೇ ದಿಟ್ಟಿಸುತ್ತಾ ಕೊಂಚ ಹೊತ್ತು ಹಾಗೆಯೇ ನಿಂತಳು. ಆದರೆ ಯಾವ ಕಡೆ ತಿಂದರೆ ಕುಗ್ಗುತ್ತೇನೆ, ಯಾವ ಕಡೆ ತಿಂದರೆ ಹಿಗ್ಗುತ್ತೇನೆ ಎಂದು ಕಣ್ಣೋಟದಿಂದ ಪತ್ತೆಮಾಡಬಹುದೆಂದು ಅವಳ ಊಹೆ. ಅದು ಛತ್ರಿಯ ಹಾಗೆ ಗುಂಡಾಗಿದ್ದದ್ದರಿಂದ ಅದಕ್ಕೆ ಯಾವ ಕಡೆಯೂ ಇರಲಿಲ್ಲ. ಎಲ್ಲೆಡೆಯೂ ಒಂದೇ ಬಣ್ಣ, ಒಂದೇ ದಪ್ಪ. ಅಂತು, ಅವಳು ಅದರ ಸುತ್ತ ಕೈಗಳೆರಡನ್ನೂ ಚಾಚಿ ನಿಂತು ಎರಡು ಚೂರು ಮುರಿದುಕೊಂಡಳು.

ಯಾವುದನ್ನು ಮೊದಲು ತಿನ್ನುವುದು ಎಂದು ಅನುಮಾನಿಸುತ್ತಾ ಒಂದು ಕೈಯಲ್ಲಿದ್ದ ಚೂರನ್ನು ಕೊಂಚ ಕಚ್ಚಿದಳು. ತಕ್ಷಣವೇ ಅವಳ ಗಲ್ಲವು ಕಾಲಿಗೆ ತಗುಲಿ ದೊಡ್ಡ ಪೆಟ್ಟಾಯಿತು. ಪಾಪ! ಅವಳಿಗೆ ಗಾಬರಿ ಯಾಯಿತು. ಹೀಗೆ ಕುಗ್ಗಿ ಕುಗ್ಗಿ ನೆಲಸಮವಾದರೆ ಏನು ಗತಿ? ಹೆಚ್ಚು ಕಾಲವಿಳಂಬಮಾಡದೆ ಇನ್ನೊಂದು ಕೈಯಲ್ಲಿದ್ದ ಚೂರನ್ನು ಕೊಂಚ ತಿನ್ನಲೇಬೇಕೆಂದು ಅವಳು ಮನಗಂಡಳು. ಜಾಣೆ. ಆದರೆ ಬಾಯನ್ನು ತೆರೆದು ಅಣಬೆಯ ಚೂರನ್ನು ಒಳಗೆ ತುರುಕುವುದೇ ಬ್ರಹ್ಮಪ್ರಯತ್ನವಾಗಿ ಹೋಯಿತು. ಕೊನೆಗೆ, ಹೇಗೋ ಕಷ್ಟದಿಂದ ಒಂದು ಸಾಸಿವೆ ಕಾಳಿನಷ್ಟು ತಿಂದಳು.

"ಅಬ್ಬ! ಕೊಂಚ ಗಾಳಿ ಬಂತು!" ಎಂದು ಪಾಪಚ್ಚಿ ಸಂತೋಷ ಪಟ್ಟಳು. ಅವಳ ತಲೆಯ ಮೇಲೆ ಅಪಾರವಾದ ನೀಲಿಯ ಆಕಾಶ. ಭೂಮಿ ಅವಳಿಗೆ ಬಹು ದೂರ ಕಾಣಿಸಿತು. ನೀಲಗಿರಿ ಬೆಟ್ಟದ ಸಾಲು ದಿಗಂತದಲ್ಲಿ ಶೋಭಿಸಿತು. ಆದರೆ, ಅವಳ ತೋಳುಗಳ ಸುದ್ದಿಯೇ ಇರಲಿಲ್ಲ. ಕೆಳಗೆ ಬರಿಯ ಒಂದು ಹಸುರು ಚಾಪೆಯನ್ನು ಹಾಸಿದ್ದ ಹಾಗೆ ಕಾಣಿಸಿತು. "ಅಯ್ಯೋ! ನನ್ನ ತೋಳುಗಳೆಲ್ಲಿ, ಕೈಗಳೆಲ್ಲಿ?" ಎಂದು ಪಾಪಚ್ಚಿ ಗೋಳಾಡಿದಳು. ಕೈಗಳನ್ನು ಬೀಸಲು ಯತ್ನಿಸಿದಳು. ಆದರೆ, ಅವು ಎಲ್ಲೋ ಕೆಳಗೆ ದೂರದಲ್ಲಿ ಮರಗಳ ಕೊಂಬೆಗಳ ನಡುವೆ ಕೊಂಚ ಅಲ್ಲಾಡಿದುವು, ಅಷ್ಟೆ! ಕಣ್ಣಿಗೆ ಕಾಣಿಸಲೇ ಇಲ್ಲ. ಆಗ, ತಾನು ನಿಂತಿದ್ದು ಒಂದು ದೊಡ್ಡ ಕಾಡಿನ ಮಧ್ಯೆ ಎಂದು ಅವಳಿಗೆ ಗೊತ್ತಾಯಿತು. ಅವಳ ಕತ್ತು ಬಹಳ ಉದ್ದವಾಗಿತ್ತು. ತಲೆಯು ನಕ್ಷತ್ರಗಳನ್ನು ಕೀಳುವಂತಿತ್ತು.

ಆಗ ಒಂದು ಪಾರಿವಾಳದ ಹಕ್ಕಿ ಅವಳ ತಲೆಯ ಹತ್ತಿರಕ್ಕೆ ಹಾರಿ ಬಂದು, ಅವಳ ಮೇಲೆ ಉಗುಳಿ, ಅವಳನ್ನು ಬೈದು, ಬಹಳವಾಗಿ ಪೀಡಿಸ ತೊಡಗಿತು. ತನ್ನ ಗೂಡಿನಿಂದ ಮೊಟ್ಟೆಗಳನ್ನು ಅಪಹರಿಸಿ ತಿನ್ನಲು ಬಂದಿರುವ ಒಂದು ದೊಡ್ಡ ಹಾವೆಂದು ಅದು ಪಾಪಚ್ಚಿಯನ್ನು ತಿಳಿದು ಕೊಂಡಿತ್ತು. "ಹಾವು, ಹಾವು!" ಎಂದು ಅರಿಚಿಕೊಂಡಿತು. "ನಾನು ಹಾವಲ್ಲಮ್ಮಾ!" ಎಂದು ಅವಳು ಎಷ್ಟು ಹೇಳಿದರೂ ಕೇಳಲಿಲ್ಲ. "ಅಯ್ಯೋ! ನಾನು ಮರಗಳ ಹೊದರುಗಳಲ್ಲಿ, ಬೇಲಿಗಳ ಸಂದಿಯಲ್ಲಿ, ಎಲ್ಲಿ ಗೂಡುಕಟ್ಟಿ ಮರಿಗಳನ್ನು ಸಾಕುತ್ತಿದ್ದರೂ ಹಾವುಗಳಿಗೇ ಆಹುತಿಯಾಗುತ್ತವೆ. ಕಡೆಗೆ, ಈ ಮರದ ತುತ್ತತುದಿಯಲ್ಲಿ ಗೂಡುಕಟ್ಟಿ ಮುದ್ದಾದ ಮೂರು ಮೊಟ್ಟೆ ಗಳನ್ನು ಇಟ್ಟರೆ, ಇಲ್ಲಿಗೂ ಬಂದೆಯಾ, ಮಾರಿ!" ಎಂದು ಯದ್ವಾತದ್ವಾ ಶಪಿಸಿತು. "ಹಾಗೆ ಅನ್ನಬೇಡಿ! ನಾನು ಹಾವಲ್ಲ. ನಾನೊಂದು ಚಿಕ್ಕ ಹುಡುಗಿ. ನನ್ನ ಹೆಸರು...." ಎಂದು ಪಾಪಚ್ಚಿ ಹೇಳತೊಡಗಿದಳು. ಅಷ್ಟರೊಳಗೆ, "ಆಕಾಶಕ್ಕಿಂತ ಆರಡಿ ಎತ್ತರ ಬೆಳೆದು ಇನ್ನೂ ಚಿಕ್ಕ ಹುಡುಗಿಯಂತೆ, ಚಿಕ್ಕ ಹುಡುಗಿ! ಚೆನ್ನಾಗಿದೆ. ಇಂಥಾ ಅವತಾರ ನಾನೆಲ್ಲೂ ನೋಡಿಲ್ಲ" ಎಂದು ಪಾರಿವಾಳ ಹೇಳಿತು. "ಅದಿರಲಿ! ನನ್ನ ಗೂಡಿನ ಹತ್ತಿರ ಏಕೆ ಬಂದೆ? ದೂರ ಹೋಗು, ತೊಲಗು" ಎಂದು ಬೇಡಿಕೊಂಡಿತು.

ಪಾಪಚ್ಚಿ ಕೊಂಚ ದೂರ ಸರಿದಳು. ತನ್ನ ಕೈಯಲ್ಲಿದ್ದ ಚೂರುಗಳನ್ನು ಬಹಳ ಶ್ರಮಪಟ್ಟು ಬಾಯ ಹತ್ತಿರಕ್ಕೆ ತಂದಳು. ಅನಂತರ, ಜಾಗರೂ ಕತೆಯಿಂದ ಒಂದೊಂದು ಚೂರಿನಿಂದಲೂ ಕೊಂಚಕೊಂಚ ತಿನ್ನುತ್ತಾ ಒಮ್ಮೆ ಹಿರಿದಾಗಿ, ಒಮ್ಮೆ ಕಿರಿದಾಗಿ, ತನ್ನ ಸಹಜವಾದ ಎತ್ತರಕ್ಕೆ ಪುನಃ ಬಂದು ಸೇರಿದಳು. ಪಾಪಚ್ಚಿಯಷ್ಟೇ ಎತ್ತರದವಳಾದಳು.

"ಅಬ್ಬ! ಒಂದು ಕೆಲಸ ಪೂರೈಸಿದ ಹಾಗಾಯಿತು. ಇನ್ನು ಮೇಲೆ ನನ್ನ ಹತ್ತಿರವೇ ಚೂರುಗಳಿರುವುದರಿಂದ ಯಾವಾಗಬೇಕೆಂದರೆ ಆಗ ನಾನೇ ನನ್ನ ಎತ್ತರ ಬದಲಾಯಿಸಿಕೊಳ್ಳುತ್ತೇನೆ. ಶಾಮು ಇಲ್ಲಿ ಇದ್ದಿದ್ದರೆ ಅವನಿಗೆ ಒಂದು ಚೂರು ತಿನ್ನಿಸಿ ಗಾಬರಿಪಡಿಸಬಹುದಾಗಿತ್ತು. ಪಿಲ್ಲಿ ಇದನ್ನು ತಿಂದರೆ ದೊಡ್ಡ ಹುಲಿಯಾಗಿಬಿಡುತ್ತಾಳೋ ಏನೋ!....ಇರಲಿ!

ಇನ್ನು ಉಳಿದಿರುವುದು ಆ ಹೂದೋಟವನ್ನು ನೋಡುವುದು ಒಂದೇ" ಎಂದುಕೊಳ್ಳುತ್ತಾ ಪಾಪಚ್ಚಿ ಮುಂದಕ್ಕೆ ನಡೆದಳು.

---

## ಬಾಬಾಬುಡನ್ ಬೆಕ್ಕು

ಹೋಗುತ್ತಾ ಹೋಗುತ್ತಾ ಒಂದು ಕಾಲುದಾರಿ ಸಿಕ್ಕಿತು. ಅದನ್ನೇ ಹಿಡಿದು ಕೊಂಚ ದೂರ ಹೋದಾಗ ಒಂದು ಪುಟ್ಟ ಬಂಗಲೆ. ಮೊಲದ ಮನೆಗಿಂತ ಸ್ವಲ್ಪ ದೊಡ್ಡದೆನ್ನಬಹುದು. "ಹೀಗೆಯೇ ನಾನು ಈ ಮನೆಯೊಳಕ್ಕೆ ನುಗ್ಗಿದರೆ ನನ್ನ ಆಕಾರವನ್ನು ಕಂಡು ಇಲ್ಲಿ ಇರುವವರು ಹೆದರಿಕೊಂಡಾರು" ಎಂದು ಯೋಚಿಸಿ, ತನ್ನ ಕೈಯಲ್ಲಿದ್ದ ಅಣಬೆಯ ಚೂರಿನಿಂದ ಕೊಂಚ ತಿಂದು ಒಂದು ಗೇಣೆತ್ತರದ ಹುಡುಗಿಯಾಗಿ ಮನೆಯ ಬಾಗಿಲ ಕಡೆ ಹೋದಳು.

ಅಲ್ಲಿ ಕೊಂಚ ಹೊತ್ತು ಅನುಮಾನಿಸುತ್ತಾ ನಿಂತಳು. ಯಾವನೋ ಜವಾನ ಎಲ್ಲಿಂದಲೋ ಓಡಿಬಂದು ಬಾಗಿಲನ್ನು ತಟ್ಟಿದನು. (ಅವನ ಮುಖವು ಮೀನಿನ ಹಾಗೆ ಕಾಣಿಸಿತು.) ಒಳಗಿಂದ ಅದೇ ಉಡುಪಿನ ಇನ್ನೊಬ್ಬ ಜವಾನ ಬಂದು ಬಾಗಿಲನ್ನು ತೆರೆದನು. (ಇವನ ಮುಖ ಒಂದು ಕಪ್ಪೆಯ ಹಾಗೆ.) ಮನೆಯೊಳಗೆ ಬಹಳ ಗದ್ದಲವಾಗುತ್ತಿತ್ತು. ಅದೇನೆಂದು ತಿಳಿಯಲು ಪಾಪಚ್ಚಿ ಕೊಂಚ ದೂರದಲ್ಲಿಯೇ ನಿಂತು ಕಿವಿಗೊಟ್ಟು ಕೇಳಿದಳು.

ಮೀನು ಮುಖದವನು ಜೇಬಿನಿಂದ ಒಂದು ದೊಡ್ಡ ಕಾಗದವನ್ನು ತೆಗೆದು ಕಪ್ಪೆಯ ಕೈಯಲ್ಲಿ ಕೊಟ್ಟು, "ಅಮ್ಮಾವರಿಗೆ. . . . ಸನ್ನಿಧಾನ ದಿಂದ. . . . ಚೆಂಡಾಟಕ್ಕೆ ಬರಬೇಕೆಂದು ಅಪ್ಪಣೆಯಾಗಿದೆ" ಎಂದು ಹೇಳಿದನು. ಕಪ್ಪೆ ಜವಾನನು, ಅದೇ ಸ್ವರದಲ್ಲಿಯೇ, "ಚೆಂಡಾಟಕ್ಕೆ ಬರಬೇಕೆಂದು ಅಪ್ಪಣೆಯಾಗಿದೆ . . . . ಸನ್ನಿಧಾನದಿಂದ . . . . ಅಮ್ಮಾವರಿಗೆ" ಎಂದು ಹೇಳಿ, ಅನಂತರ, ಆದರದಿಂದ ಆ ಕಾಗದವನ್ನು ಸ್ವೀಕರಿಸಿದನು. ಇಬ್ಬರೂ ಮಂಡಿಯೂರಿ, ತಲೆಬಾಗಿ, ಒಬ್ಬರಿಗೊಬ್ಬರು ವಂದಿಸಿದರು. ಆಗ, ಅವರಿಬ್ಬರ ಕೆಂಪು ರುಮಾಲುಗಳೂ ಜಾರಿಬಿದ್ದು ಬಿಚ್ಚಿಹೋದುವು.



ಮೀನುಮುಖದವನು ಒಂದು ದೊಡ್ಡ ಕಾಗದವನ್ನು ತೆಗೆದುಕೊಟ್ಟು,
"ಅಮ್ಮಾವರಿಗೆ. . . . ಸನ್ನಿಧಾನದಿಂದ. . . ." ಎಂದು ಹೇಳಿದನು.

ಪಾಪಚ್ಚಿಗೆ ತಡೆಯಲಾರದ ನಗು. ಕೊಂಚ ದೂರ ಹೋಗಿ, ಮರೆಯಲ್ಲಿ ನಕ್ಕು, ಮತ್ತೆ ಮೊದಲಿನ ಜಾಗಕ್ಕೆ ಬಂದಳು. ಅಷ್ಟರಲ್ಲಿ ಮಿಾಸು ಜವಾನ ಹೊರಟುಹೋಗಿದ್ದನು. ಕಪ್ಪೆ ಮೂತಿಯವನು ಮಾತ್ರ ಹೊಸಲಲ್ಲಿ ಕುಳಿತು ಗೊರಕೆಹೊಡೆಯುತ್ತಿದ್ದನು. "ಜವಾನರಿಗೆ ಇಷ್ಟು ಬೇಗ ನಿದ್ದೆ ಎಲ್ಲಿಂದ ಬರುತ್ತೆ," ಎಂದು ಪಾಪಚ್ಚಿ ಆಶ್ಚರ್ಯಪಟ್ಟಳು.

ಪಾಪಚ್ಚಿ ಬಾಗಿಲ ಬಳಿ ಹೋಗಿ ನಿಂತು, ಗಟ್ಟಿಯಾಗಿ "ಬಾಗಿಲು" ಎಂದಳು. ಜವಾನ ಕಣ್ತೆರೆದನು. ಜವಾನರು ಇಷ್ಟು ಬೇಗ ನಿದ್ದೆಯಿಂದ ಎಚ್ಚೆತ್ತುಕೊಳ್ಳುವುದು ಹೇಗೆ ಎಂದು ಪಾಪಚ್ಚಿ ಈಗ ಆಶ್ಚರ್ಯಪಟ್ಟಳು. "ಯಾಕಮ್ಮಾ, ಸುಮ್ಮನೆ ಕೂಗುತ್ತೀರಿ? ಗಂಟಲು ಒಡೆದುಹೋಗುತ್ತೆ, ಅಷ್ಟೆ! ಜವಾನ ಎನ್ನುವ ಪಿಂಡ ಬಾಗಿಲ ಹೊರಗೆ ದೆವ್ವದ ಹಾಗೆ ಇಲ್ಲಿ ಕುಳಿತಿದೇನೆ. ಒಳಗಿನಿಂದ ಬಾಗಿಲು ತೆಗೆಯುವವರು ಯಾರು? ಒಳಗಿನ ಗಲಾಟೆಯಲ್ಲಿ ಅಲ್ಲಿರುವವರಿಗೆ ಕಿವಿ ಕೇಳಿಸುವುದು ತಾನೆ ಹೇಗೆ? ನೀವೇ ಯೋಚನೆ ಮಾಡಿ! ಮನೆ ಮೇಲೆ ಸಿಡಿಲು ಬಡಿದರೂ ಒಳಗಿರುವವರಿಗೆ ಗೊತ್ತಾಗುವಂತಿಲ್ಲ" ಎಂದು ಕಪ್ಪೆ ಹೇಳಿದನು.

ಹೌದು! ಆ ಬಂಗಲೆಯ ಒಳಗಿನಿಂದ ವಿವಿಧ ಶಬ್ದಗಳು ಕಲೆತು ಕರ್ಣಕಠೋರವಾಗಿ ಹೊರಬೀಳುತ್ತಿದ್ದುವು—ಕೂಗು, ರೇಗು, ಅಳು, ಬೈಗುಳು, ಆರ್ಭಟ, ಕೆಮ್ಮಲು, ಸೀನು, ಅಟ್ಟಹಾಸ . . . . ಎಲ್ಲವೂ ಒಟ್ಟಿಗೆ, ಒಂದೇ ಕಡೆಯಿಂದ! ಕಪ್ಪೆ "ನಾನು ಒಳಗಿದ್ದಿದ್ದರೆ ಬಾಗಿಲು ತೆಗೆದು ನಿಮ್ಮನ್ನು ಮನೆಯೊಳಕ್ಕೆ ಬಿಡುತ್ತಿದ್ದೆ. ಅಥವಾ, ನೀವು ಒಳಗಿದ್ದು ಬಾಗಿಲು ತಟ್ಟಿದರೆ, ನಾನು ತೆರೆದು ಹೊರಗೆ ಬಿಡುತ್ತಿದ್ದೆ. ಈಗ ಎರಡೂ ಸಾಧ್ಯವಿಲ್ಲ" ಎಂದು ಹೇಳಿ ಸ್ವಸ್ಥಾನದಲ್ಲಿ ಕುಳಿತು ನಿರಾತಂಕವಾಗಿ ಮತ್ತೆ ಗೊರಕೆ ಹೊಡೆಯುವುದಕ್ಕೆ ಮೊದಲುಮಾಡಿದನು.

"ಮನೆಯ ಜವಾನನ ಸ್ವಭಾವದಿಂದ ಮನೆಯವರ ಸ್ವಭಾವವನ್ನು ನಾವು ನಿರ್ಧರಿಸಿಬಿಡುತ್ತೇವೆ. ಅಮ್ಮಾವರು ನಿಜವಾಗಿ ದೊಡ್ಡಮನುಷ್ಯರಾಗಿರಬೇಕು. ಆದರೂ, ಇವನು ಯಾರಾದರೂ ಬಂದರೆ, ಏನು, ಎತ್ತ ಎಂದು ವಿಚಾರಿಸಿ ಒಳಗೆ ತಿಳಿಸಿ ಮರ್ಯಾದೆಯಿಂದ ನಡೆದುಕೊಳ್ಳಬೇಡವೆ?"

ಎಂದು ಪಾಪಚ್ಚಿ ತನಗೆ ತಾನೇ ಹೇಳಿಕೊಂಡಳು. ನಿದ್ದೆಮಾಡುತ್ತಿದ್ದ ಆ ಜವಾನನನ್ನು ಒದ್ದುಬಿಡೋಣವೆನ್ನಿಸಿತು. ಆದರೂ ಸೌಮ್ಯವಾಗಿ "ಅಯ್ಯಾ! ನಾನು ಒಳಗೆ ಹೋಗುವುದು ಹೇಗೆ?" ಎಂದು ಅವನನ್ನು ಕೇಳಿದಳು. ಕಪ್ಪೆ ಕಣ್ತೆರೆದು, "ನಾನು ನಾಳೆ ಬೆಳಗ್ಗೆತನಕ ಇಲ್ಲಿಯೇ.. .." ಎಂದು ಹೇಳುತ್ತಿರುವಾಗಲೇ ಮನೆಯೊಳಗಿಂದ ಯಾರೋ ಬಲವಾಗಿ ಎಸೆದ ಒಂದು ಬೋಗುಣಿ ಬಾಗಿಲನ್ನು ತಳ್ಳಿಕೊಂಡು ಕಪ್ಪೆಯ ತಲೆಯ ಮೇಲಿಂದ ಹಾರಿ ಕೊಂಚ ದೂರವಾಗಿ ಬಿತ್ತು! "ಥೂ! ಇವನೊಂದಿಗೆ ಏನು ಮಾತು?" ಎಂದು ಹೇಳುತ್ತಾ ಪಾಪಚ್ಚಿ ಬಾಗಿಲನ್ನು ನೂಕಿಕೊಂಡು ಒಳಗೆ ಪ್ರವೇಶಿಸಿದಳು.

ಆ ಬಂಗಲಿಯಲ್ಲಿ ಮೊದಲನೆಯ ಕೊಠಡಿಯೇ ಅಡಿಗೆಯ ಮನೆ. ತುಂಬಾ ಸೆಕೆ....ಹೊಗೆ....ಮೆಣಸಿನ ಪುಡಿಯ ಘಾಟು. ನಟ್ಟನಡುವೆ ಹಾಕಿದ್ದ ಒಂದು ಬೆಂಚಿನ ಮೇಲೆ ಅಮ್ಮಾವರು ಗಂಭೀರವಾಗಿ ಕುಳಿತು ಮಗುವನ್ನು ತೊಡೆಯ ಮೇಲೆ ಎತ್ತಿಕೊಂಡು ಆಟವಾಡಿಸುತ್ತಿದ್ದರು. ಅಡಿಗೆಯವಳು ಒಲೆಯಲ್ಲಿ ಕುದಿಯುತ್ತಿದ್ದ ಸೀರುಳ್ಳಿ ಹುಳಿಯನ್ನು ಸೌಟಿನಿಂದ ತೆಗೆದು ಬಾಯಿಗೆ ಸುರಿದುಕೊಂಡು ರುಚಿನೋಡುತ್ತಿದ್ದಳು. ಎಲ್ಲರೂ ಎಡಬಿಡದೆ ಸೀನುತ್ತಿದ್ದರು. ತಾಯಿ, ಕೂಸು, ಪಾಪಚ್ಚಿ ಎಲ್ಲರೂ ಅನೇಕಸಲ ಒಟ್ಟಿಗೆ ಸೀತರು. ಆದರೆ, ಇಬ್ಬರಿಗೆ ಮಾತ್ರ ಅಲ್ಲಿ ಮೆಣಸಿನಪುಡಿಯಿಂದ ಯಾವ ತೊಂದರೆಯೂ ಆದ ಹಾಗೆ ಕಾಣಿಸಲಿಲ್ಲ—ಅಡಿಗೆಯವಳಿಗೆ, ಮತ್ತು ಅಲ್ಲೇ ಒಲೆಯ ಮೇಲೆ ಕುಳಿತು ಹಲ್ಲುಕಿರಿಯುತ್ತಿದ್ದ ಬೆಕ್ಕಿಗೆ!

ಪಾಪಚ್ಚಿ ಒಳಗೆ ಹೋಗಿ ಬಹಳ ಹೊತ್ತು ನಿಂತುಕೊಂಡಿದ್ದರೂ ಯಾರೂ ಅವಳೊಂದಿಗೆ ಮಾತಾಡಲೇ ಇಲ್ಲ. ಅವಳು ಬಂದ ಸುದ್ದಿ ಕೂಡ ಯಾರಿಗೂ ಮುಟ್ಟಿರಲಿಲ್ಲ. ಎಲ್ಲರೂ ತಮ್ಮ ತಮ್ಮ ಕೆಲಸ ಕಾರ್ಯಗಳಲ್ಲಿ ನಿರತರಾಗಿದ್ದರು. ಆದ್ದರಿಂದ, ಪಾಪಚ್ಚಿಯೇ ಮೊದಲು ಮಾತನಾಡಬೇಕಾಗಿಬಂದಿತು. ಅವಳು, "ರೀ! ಆ ಬೆಕ್ಕು ಯಾಕೆ ಹಾಗೆ ಹಲ್ಲುಕಿರಿಯುತ್ತಾ ಇದೆ?" ಎಂದು ಕೇಳಿದಳು. "ಅದು ಬಾಬಾಬುಡನ್ ಬೆಕ್ಕು. ಆದ್ದರಿಂದಲೇ ಹಾಗೆ ಹಲ್ಲುಕಿರಿಯುವುದು....ಲೇ, ಹಂದೀ!" ಎಂದು ಅಮ್ಮಾವರು ಉತ್ತರವಿತ್ತರು.

"ಲೇ! ಹಂದೀ" ಎಂದು ಅಮ್ಮಾವರು ಬೈದದ್ದನ್ನು ಕೇಳಿ ಪಾಪಚ್ಚಿ ಬೆಚ್ಚಿದಳು. ಆದರೆ, ಅದು ತನ್ನನ್ನು ಕುರಿತು ಹೇಳಿದ್ದಲ್ಲ; ಅವಳ ಕೂಸು ರಂಪಮಾಡಿದ್ದಕ್ಕಾಗಿ ಹೇಳಿದ ಕೋಪದ ಮಾತು ಎಂದು ಅನಂತರ ಗೊತ್ತಾಯಿತು. ಪಾಪಚ್ಚಿ, ಮತ್ತೆ, "ಬಾಬಾಬುಡನ್ ಬೆಕ್ಕು ಹಲ್ಲು ಕಿರಿಯುತ್ತದೆಯೇ? ಬೆಕ್ಕುಗಳಿಗೆ ಈ ವಿದ್ಯೆ ಬರುತ್ತೆ ಎಂದು ನನಗೆ ಇದು ವರೆಗೂ ಗೊತ್ತೇ ಇರಲಿಲ್ಲ" ಎಂದಳು...."ಓಹೋ! ಕಿರಿಯುದೆ ಏನು? ಎಲ್ಲಕ್ಕೂ ಬರುತ್ತೆ. ಆದರೆ, ಕೆಲವು ಅಭ್ಯಾಸಮಾಡದೆ ಹಾಗೆಯೇ ಬಿಟ್ಟು ಬಿಟ್ಟಿವೆ, ಕೆಲವು ಅಭ್ಯಾಸಮಾಡಿವೆ, ಅಷ್ಟೆ. ನಮ್ಮ ಮನೆ ಬಾಬಾ ಬುಡನಿಗೆ ಚೆನ್ನಾಗಿ ಅಭ್ಯಾಸವಾಗಿದೆ" ಎಂದು ಅಮ್ಮಾವರು ಹೇಳಿದರು. "ನನಗೆ ಗೊತ್ತೇ ಇರಲಿಲ್ಲ" ಎಂದು ಪಾಪಚ್ಚಿ ಹೇಳಿದಾಗ, ಅಮ್ಮಾವರು ಕೋಪಿಸಿ, "ನಿನಗೇನು ಗೊತ್ತಿದೆ! ಕತ್ತೆ ಮರಿ!" ಎಂದು ಹಾಸ್ಯಮಾಡಿ ದರು. ಪಾಪಚ್ಚಿ ಏನು ಮಾಡಿಯಾಳು?

ಅವಳಿಗೆ ಅಳು ಬಂತು. ಹೀಗೇನಾದರೂ ಶಾಮು ಅವಳನ್ನು ಬೈದಿದ್ದರೆ, ಅವಳು ಅಳುತ್ತಾ ಓಡಿಹೋಗಿ ಅಮ್ಮನಿಗೆ ಹೇಳುತ್ತಿದ್ದಳು. "ಹೋಗೆ! ನನ್ನ ಕೈಯಲ್ಲಾಗುವುದಿಲ್ಲ ನಿಮ್ಮ ಜಗಳ ತೀರಿಸುವುದಕ್ಕೆ, ಮೂರು ಹೊತ್ತೂ ಇದೇ ಕೆಲಸ ನಿಮಗೆ!" ಎಂದು ಅಮ್ಮ ಹೇಳಿಬಿಟ್ಟರೆ, ಹೆಬ್ಬಾಗಿಲ ಬಳಿಯೇ ನಿಂತು, ಅಣ್ಣ ಬರುವತನಕ ಕಾದಿದ್ದು, ಕೋಪ ಆರಿ ಹೋಗದಹಾಗೆ ಮಧ್ಯೆ ಮಧ್ಯೆ ಅಳುತ್ತಾ ಇದ್ದು, ಅಣ್ಣನಿಗೆ ಹೇಳಿ ಶಾಮುವಿಗೆ ತಕ್ಕ ಶಿಕ್ಷೆ ಮಾಡಿಸುತ್ತಿದ್ದಳು. ಈಗ ಇಲ್ಲಿ ಯಾರಿಗೆ ಹೇಳುವುದು? ಯಾರಿಂದ ಹೊಡೆಯಿಸುವುದು? ಆದ್ದರಿಂದ, ಸುಮ್ಮ ನಾದಳು.

ಅಷ್ಟರಲ್ಲಿ ಅಡಿಗೆಯವಳಿಗೆ ಇದ್ದಕ್ಕಿದ್ದ ಹಾಗೆ ಹುಚ್ಚು ಹಿಡಿಯಿತು! ಒಲೆಯಮೇಲಿರಿಸಿದ್ದ ಸಕಲ ಪದಾರ್ಥಗಳನ್ನೂ ಪಾತ್ರೆ ಸಹಿತ ಎತ್ತಿ ನಾಲ್ಕು ಕಡೆಗೂ ಎಸೆಯುತ್ತಾ ಬಂದಳು. ಪಾಪಚ್ಚಿಗೆ ಭಯವಾಯಿತು. ಅಮ್ಮಾ ವರು ಮಾತ್ರ ಕೊಂಚವೂ ಹೆದರದೆ ಅಲ್ಲಿಯೇ ಹಾಡುತ್ತಾ ಕುಳಿತಿದ್ದರು. ಒಂದುಸಾರಿ ಅವರ ಮೈಮೇಲೂ ಅನ್ನದ ತಪ್ಪಲೆ ಬಿತ್ತು. ಆದರೂ ಹಾಡು ತ್ತಿದ್ದರು. ಕೂಸಿನ ಕಿರಿಚಾಟ ಮಾತ್ರ ಜಾಸ್ತಿಯಾಗಿ ಕಿವಿ ಒಡೆದುಹೋಗುವ

ಹಾಗಿತ್ತು. ಅದರ ರೋದನ ಪಾಪಚ್ಚಿಗೆ ಹಂದಿಯ ಧ್ವನಿಯಂತೆಯೇ ಕೇಳಿಸಿತು.

ಆಗ, ಅಡಿಗೆಯವಳು ಎಸೆದ ಒಂದು ಸಟ್ಟುಗ ಕೂಸಿನ ಮೂಗಿನ ತುದಿಗೆ ಸರಿಯಾಗಿ ತಗುಲಿತು. "ಅಯ್ಯೋ! ಕೂಸು" ಎಂದು ಪಾಪಚ್ಚಿ ಕೂಗಿದಳು. ಅಮ್ಮಾವರು, "ಯಾಕಮ್ಮ ಬಡುಕೊಳ್ಳುತ್ತೀಯೆ! ಅವರವರ ಪಾಡು ಅವರವರಿಗೆ. ನಿನ್ನ ಮೂಗು ನಿನಗೆ, ಕೂಸಿನ ಮೂಗು ಕೂಸಿಗೆ" ಎಂದು ಗದರಿಸಿದರು. ಮತ್ತೆ, ಮಗುವಿನ ಅಳುವನ್ನು ನಿಲ್ಲಿಸಲು,

ಸೀನಪ್ಪಾ, ಸೀನಪ್ಪಾ!
ಮೂಗಲಿ ಮೆಣಸಸು ಹಾಕಪ್ಪಾ!!
ಭಂ, ಭಂ, ಭಂ,—ಭಂ, ಭಂ, ಭಂ!
ಭಂ, ಭಂ, ಭಂ, ಭಂ,—ಭಂ, ಭಂ, ಭಂ!!

ಕುಟ್ಟಪ್ಪಾ, ತಟ್ಟಪ್ಪಾ!
ಬೆನ್ನಲಿ ಏಟಸು ಹಾಕಪ್ಪಾ!!
ಭಂ, ಭಂ, ಭಂ,—ಭಂ, ಭಂ, ಭಂ!
ಭಂ, ಭಂ, ಭಂ, ಭಂ,—ಭಂ, ಭಂ, ಭಂ!!

ಎಂದು ಹಾಡನ್ನು ಹೇಳುತ್ತಾ ತಾಳಕ್ಕೆ ಸರಿಯಾಗಿ ಕೂಸಿನ ಬೆನ್ನಿನ ಮೇಲೆ ಬಲವಾಗಿ ಹೊಡೆಯುತ್ತಿದ್ದರು.

"ಭಂ, ಭಂ, ಭಂ,—ಭಂ, ಭಂ, ಭಂ!
ಭಂ, ಭಂ, ಭಂ, ಭಂ,—ಭಂ, ಭಂ, ಭಂ!!"

ಎಂಬುದನ್ನು ಮಾತ್ರ ಪ್ರತಿಸಲವೂ ಅಮ್ಮಾವರೂ ಅಡಿಗೆಯವಳೂ ಕೂಸೂ ಒಟ್ಟಿಗೆ ಹೇಳುತ್ತಿದ್ದರು. ಒಂದೊಂದು ಚರಣವೂ ಮುಗಿದ ಮೇಲೆ ಕೂಸನ್ನು ಮೇಲಕ್ಕೆಸೆದು, ಕೆಳಕ್ಕೆ ಬೀಳುವಾಗ ಅದನ್ನು ಹಿಡಿದು ಕೊಳ್ಳುತ್ತಿದ್ದರು. ಅಂತು ಇಂತು, ಅದಕ್ಕೆ ಬಲು ಹಿಂಸೆಯಾಗುತ್ತಿತ್ತು.

ಕೊನೆಗೆ ಅಮ್ಮಾವರು ಥಟಕ್ಕನೆದ್ದು, "ಕೋ, ನೀನೂ ಕೊಂಚ ಆಡಿಸು!" ಎಂದು ಹೇಳಿ ಕೂಸನ್ನು ಪಾಪಚ್ಚಿ ನಿಂತಿದ್ದ ಕಡೆ ಎಸೆದರು. ದೇವರ ದಯೆಯಿಂದ ಕೂಸು ಕೆಳಗೆ ಬೀಳುವುದರೊಳಗೇ ಪಾಪಚ್ಚಿ ಅದನ್ನು

ಹಿಡಿದುಕೊಂಡಳು. "ನಾನು ಈಗ ಅರಮನೆಗೆ ಹೋಗಬೇಕು" ಎಂದು ಹೇಳಿ ಅಮ್ಮಾವರು ಒಳಗಿನ ಕೊಠಡಿಗೆ ಹೊರಟುಹೋದರು. ಅಡಿಗೆ ಯುವಳು ಅವರ ಬೆನ್ನ ಹಿಂದೆ ಒಂದು ಚೆಂಬನ್ನೆಸೆದಳು.

"ಇಂಥಾ ತಾಯಿ ಎಲ್ಲಾದರೂ ಉಂಟೆ? ಪಿಶಾಚಿಯಹಾಗೆ ಪೀಡಿಸುತ್ತಾಳೆ. ಅಯ್ಯೋ, ಪಾಪ! ಈಗಲೇ ಈ ಚಿತ್ರಹಿಂಸೆಯಾದರೆ ಮುಂದೆ ಬಾಳಿ ಬದುಕುವುದು ಹೇಗೆ?" ಎಂದು ಪಾಪಚ್ಚಿ ಕನಿಕರಪಟ್ಟಳು. "ಈ ಹಾಳು ಮನೆಯಲ್ಲಿ ನೀನಿರಬೇಡ" ಎಂದು ಹೇಳಿ ಅದನ್ನು ಮನೆಯ ಹೊರಗೆ ತಂದಳು. ಆದರೆ, ಅದನ್ನು ಸರಿಯಾಗಿ ಎತ್ತಿಕೊಳ್ಳುವುದೇ ಕಷ್ಟವಾಗಿತ್ತು. ಕ್ಷಣ ಕ್ಷಣಕ್ಕೂ ಕೆಮ್ಮುವುದು, ಕಿರಿಚುವುದು, ಸೀನುವುದು, ಕೈಕಾಲು ಮಡಿಸುವುದು, ನೀಡುವುದು, ಹೀಗೆ ಬಹಳ ತೊಂದರೆಕೊಟ್ಟಿತು. ಮೊದಲು ಅಂದವಾಗಿ ಕಂಡ ಅದರ ಆಕಾರ ಈಗ ಅವಳಿಗೆ ಅಸಹ್ಯವಾಗಿ ಕಾಣಿಸಿತು. ಉದ್ದವಾದ ಮೂತಿ....ದಪ್ಪ ಹೊಟ್ಟೆ....ಸಣ್ಣ ಸಣ್ಣ ಕಾಲುಗಳು ....ಪುಟ್ಟದೊಂದು ಬಾಲ ಬೇರೆ. ನೋಡುತ್ತಿದ್ದಾಗಲೇ ಅದು ನಿಜವಾದ ಒಂದು ಹಂದಿ ಮರಿಯಾಗಿಬಿಟ್ಟಿತು. ಪಾಪ! ಅವಳಿಗೆ ಬಹಳ ವ್ಯಸನವಾಯಿತು. "ಎಂಥಾ ಮುದ್ದಾದ ಕೂಸು! ಇದಕ್ಕೆ ಈ ಗತಿಯಾಯಿತಲ್ಲಾ!" ಎಂದು ಮರುಗಿದಳು. "ಲಕ್ಷಣವಾದ ಮಗು, ಮನೆಗೆ ತೆಗೆದುಕೊಂಡು ಹೋಗಿ ಸಾಕಬಹುದು, ಆಡಿಸಬಹುದು" ಎಂದು ಅದರ ಮೇಲೆ ಪ್ರೀತಿಯಿಟ್ಟರೆ, ಅದು ಹೀಗಾಗಬೇಕೆ? ಎಂದು ಹೇಳುತ್ತ ಹಂದಿ ಮರಿಯನ್ನು ನಿಧಾನವಾಗಿ ನೆಲಕ್ಕಿಳಿಸಿದಳು. ಅದು ಸಂತೋಷದಿಂದ ಓಡಿ ಹೋಯಿತು.

ಪಾಪಚ್ಚಿಗೆ ಆದ ಆಶಾಭಂಗವನ್ನು ನೋಡಿ ಸಗುತ್ತಾ, ಹಲ್ಲುಕಿರಿಯುತ್ತಾ, ಬಾಬಾಬುಡನ್ ಬೆಕ್ಕು ಅಲ್ಲೇ ಹತ್ತಿರವಿದ್ದ ಒಂದು ಮರದ ಮೇಲೆ ಕುಳಿತಿತ್ತು. ಅದಕ್ಕೆ ನೀಳವಾದ ಉಗುರುಗಳು; ಲೆಕ್ಕವಿಲ್ಲದಷ್ಟು ಹಲ್ಲಿನ ಸಾಲುಗಳು. ಆದರೂ, ಬೆಕ್ಕು ಸೌಮ್ಯಮೂರ್ತಿ; ಹಾಸ್ಯಪ್ರಿಯ. ಪಾಪಚ್ಚಿ, "ಬಾಬಾಬುಡನ್!" ಎಂದು ಮೆಲ್ಲಗೆ ಮಾತಾಡಿಸಿದಳು. ಬಾಬಾಬುಡನ್ ಎಂಬುದು ಅದರ ಅಡ್ಡಹೆಸರೋ, ಅಥವಾ, ಪಾಠಶಾಲೆಯಲ್ಲಿ ಇತರ ಬೆಕ್ಕುಗಳು ಕೊಟ್ಟ ಹಾಸ್ಯದ ಹೆಸರೋ, ಅವಳಿಗೆ ಏನೂ ತಿಳಿಯದು.

ಆದರೆ, ಬೆಕ್ಕು ರೇಗಲಿಲ್ಲ. ಹಲ್ಲುಕಿರಿಯುತ್ತಲೇ ಇತ್ತು. ಹತ್ತಿಪ್ಪತ್ತು ಹಲ್ಲುಗಳು ಹೊರಗೆ ಕಾಣಿಸಿತು. ಪಾಪಚ್ಚಿಗೆ ಕೊಂಚ ಸಮಾಧಾನ ವಾಯಿತು.

"ರೀ! ನಾನು ಯಾವ ದಾರಿಯಿಂದ ಮುಂದಕ್ಕೆ ಹೋಗಬೇಕು?" ಎಂದು ಕೇಳಿದಳು.

"ಎಲ್ಲಿಗೆ ಹೋಗಬೇಕು, ಹೇಳಿ."

"ಇಂಥಾ ಕಡೆ ಹೋಗಬೇಕು, ಎಂದು ನನಗೆ ಗೊತ್ತಿಲ್ಲ. ಎಲ್ಲಿ ಗಾದರೂ ಸರಿಯೆ!"

"ಹಾಗಾದರೇನಂತೆ? ಎಲ್ಲಾ ದಾರಿಯೂ ಒಂದೆ. ಸೇರಿಯೇ ಸೇರುತ್ತೆ."

"ಅದಿರಲಿ! ನನ್ನ ಅವಸ್ಥೆ ನೋಡಿ ಹಾಗೆ ನೀವು ನಗಬೇಡಿ. ನನಗೆ ಬೇಗ ಅಳು ಬಂದುಬಿಡುತ್ತೆ. ಇಲ್ಲಿ ಹತ್ತಿರ ಯಾರ ಯಾರ ಮನೆಗಳಿವೆ, ಹೇಳಿ."

ಬೆಕ್ಕು ಒಂದು ಕೈಯನ್ನು ಎತ್ತಿ ತೋರಿಸುತ್ತಾ, "ಅಲ್ಲಿ ಒಂದು ಟೋಪಿ ಅಂಗಡಿಯವನ ಮನೆ ಇದೆ" ಎಂದು ಹೇಳಿ, ಇನ್ನೊಂದು ಕೈಯನ್ನು ಎತ್ತಿ, "ಈ ಕಡೆ ಒಂದು ಅಳಿಲು ಮರಿಯ ಮನೆಯಿದೆ. ಇವರಿಬ್ಬರ ಮನೆಗಳಲ್ಲಿ ಯಾವುದಕ್ಕಾದರೂ ಹೋಗಬಹುದು. ಇಬ್ಬರಿಗೂ ಬುದ್ಧಿ ನೆಟ್ಟಗಿಲ್ಲ" ಎಂದು ಹೇಳಿತು.

"ಸರಿ! ಸರಿ! ನನಗೆ ಹುಚ್ಚರ ಸಹವಾಸವೇ ಬೇಕಿಲ್ಲ. ನಾನೆಲ್ಲಿಯೂ ಹೋಗುವುದೇ ಇಲ್ಲ."

"ಹೋಗದೇ ಇರುವುದಕ್ಕಾಗದು. ಇಲ್ಲಿ ಎಲ್ಲರಿಗೂ ಹುಚ್ಚು ಹಿಡಿದಿದೆ. ನಿಮಗೂ ಹುಚ್ಚು; ನನಗೂ ಹುಚ್ಚು."

"ನನ್ನನ್ನು ಹುಚ್ಚಿ ಅಂತ ಕರೆದರೆ ನಾನು ಸುಮ್ಮನಿರುವುದಿಲ್ಲ."

"ಚೆನ್ನಾಯಿತು! ಹುಚ್ಚು ಹಿಡಿಯದಿದ್ದರೆ, ಇಲ್ಲಿ ಯಾಕ ಬಂದಿರಿ?"

ಪಾಪಚ್ಚಿಗೆ ಈ ನ್ಯಾಯ ಸರಿಯೆಂದು ತೋರಲಿಲ್ಲ. ಆದರೂ, "ನನ್ನ ಮಾತು ಹಾಗಿರಲಿ! ಹುಚ್ಚು ಹಿಡಿದವರಿಗೆ ತಾವು ಹುಚ್ಚರೆಂದು ಗೊತ್ತೇ ಆಗುವುದಿಲ್ಲವಂತೆ. ನೀವು ನೀವೇ ಅದು ಹೇಗೆ ತಿಳಿದುಕೊಂಡಿರಿ?" ಎಂದಳು.

"ಹೇಳುತ್ತೇನೆ, ಕೇಳಿ! ಹುಚ್ಚು ಹಿಡಿಯದಿದ್ದಾಗ, ಸಂತೋಷ ತೋರಿಸುವುದಕ್ಕೆ, ನಾಯಿ ಏನು ಮಾಡುತ್ತದೆ?"

"ಬಾಲ ಅಲ್ಲಾಡಿಸುತ್ತದೆ."

"ಕೋಪ ಬಂದಾಗ?"

"ಗುರ್ರೆನ್ನುತ್ತದೆ."

"ಆದರೆ, ನಾನು ಹಾಗಲ್ಲ. ಕೋಪ ಬಂದಾಗ ಬಾಲ ಅಲ್ಲಾಡಿಸುತ್ತೇನೆ. ತೃಪ್ತಿಯಾದಾಗ, ಸಿರ್ರೆನ್ನುತ್ತೇನೆ. ಆದ್ದರಿಂದ, ನನಗೆ ಹುಚ್ಚು ಹಿಡಿದಿದೆ. ನಾನು ಹುಚ್ಚ, ತಿಳಿಯಿತೆ?"

ಪಾಪಚ್ಚಿಗೆ ಇದು ಹೇಗೆಂದು ಅರ್ಥವಾಗಲಿಲ್ಲ. "ನಮ್ಮ ಮನೆಯ ಪಿಲ್ಲಿ ಸಿರ್ರೆನ್ನುವುದೇ ಇಲ್ಲ. ಅವಳು ಅನ್ನುವುದು ಇನ್ನೂ ಇಂಪಾಗಿ ಇರುತ್ತದೆ" ಎಂದಳು. ಆದರೆ, ಪಿಲ್ಲಿ ಯಾರೆಂದು ಬಾಬಾಬುಡನ್ ವಿಚಾರಿಸಲೇ ಇಲ್ಲ. ಅಷ್ಟು ಜಂಭ ಅದಕ್ಕೆ. ಕೊಂಚ ಹೊತ್ತು ಸುಮ್ಮನಿದ್ದು, "ನೀವು ಅರಮನೆಗೆ ಚೆಂಡಾಟಕ್ಕೆ ಹೋಗುವುದಿಲ್ಲವೋ?" ಎಂದು ವಿಚಾರಿಸಿತು. "ನನ್ನನ್ನು ಕರೆದಿಲ್ಲ. ನೋಡಬೇಕೆಂದು ಆಸೆಯಿದೆ. ನೀವು ಕರೆದುಕೊಂಡು ಹೋಗುತ್ತೀರಾ?" ಎಂದು ಕೇಳಿದಳು. ಉತ್ತರವೇ ಇಲ್ಲ. "ಚಿಂತೆ ಇಲ್ಲ. ಅಲ್ಲಿ ಕಾಣಿಸಿಕೊಳ್ಳುತ್ತೇನೆ" ಎಂದು ಹೇಳಿ ಬೆಕ್ಕು ಇದ್ದಕ್ಕಿದ್ದ ಹಾಗೆ ಮಾಯವಾಯಿತು!

ಅದು ಮಾಯವಾದದ್ದನ್ನೇ ನೋಡುತ್ತಾ ಪಾಪಚ್ಚಿ ಆ ಮರದ ಕೆಳಗೆ ನಿಂತಿದ್ದಳು. ಹಾಗೆ ನೋಡುತ್ತಿರುವಾಗಲೇ, ಬೆಕ್ಕು ಮತ್ತೆ ಕಾಣಿಸಿಕೊಂಡಿತು. "ಕೇಳುವುದನ್ನು ಮರೆತುಬಿಟ್ಟೆ! ಕೂಸಿನ ಗತಿ ಏನಾಯಿತು?" ಎಂದು ವಿಚಾರಿಸಿತು. "ಅಯ್ಯೋ! ಪಾಪ! ಅದು ಹಂದಿಮರಿಯಾಗಿ ಹೋಯಿತು. ಅನ್ಯಾಯ. ಅದನ್ನು ಹೇಗೆ ಮುದ್ದಿಸುವುದು ಎಂದು

ಎಸೆದುಬಿಟ್ಟೆ" ಎಂದು ಪಾಪಚ್ಚಿ ಉತ್ತರಕೊಟ್ಟಳು. "ನನಗೆ ಆಗಲೇ ಗೊತ್ತಿತ್ತು" ಎಂದು ಹೇಳಿ ಬೆಕ್ಕು ಪುನಃ ಕಣ್ಮರೆಯಾಯಿತು.

ಇನ್ನೊಂದುಸಾರಿ ಕೂಡ ಬೆಕ್ಕು ಬರಬಹುದೆಂದು ಶಂಕಿಸಿ ಪಾಪಚ್ಚಿ ಕೊಂಚ ಹೊತ್ತು ಕಾದಳು. ಆಮೇಲೆ ಅಳಿಲುಮರಿಯ ಮನೆಯ ಕಡೆ ಹೊರಟಳು. ಆಗ ಅವಳೆದುರಿಗೆ ಇನ್ನೊಂದು ಮರದ ಕೊಂಬೆಯಲ್ಲಿ ಬೆಕ್ಕು ಮತ್ತೆ ಕಾಣಿಸಿಕೊಂಡು, "ಏನು ಹೇಳಿದಿರಿ? ಹಂದಿಯೋ, ಸಂದಿಯೋ?" ಎಂದು ಕೇಳಿತು. "ಹಂದಿ!....ನೋಡಿ! ದಯವಿಟ್ಟು ಬಾರಿ



ಬಾರಿಗೂ ಹೀಗೆ ಬಂದು ನನಗೆ ತೊಂದರೆಕೊಡಬೇಡಿ" ಎಂದು ಕೇಳಿ ಕೊಂಡಳು. "ಆಗಲಿ!" ಎಂದು ಹೇಳುತ್ತಾ ಬೆಕ್ಕು ಮಾಯವಾಯಿತು.

ಆದರೆ, ಈಸಲ ಕೊಂಚ ಕೊಂಚವಾಗಿ ಮಾಸಿಹೋಗಿ ಮಾಯ ವಾಗುತ್ತಾ ಬಂತು. ಬಾಲದ ತುದಿ ಮೊದಲು ಹೋಯಿತು. ಅಲ್ಲಿಂದ ಕ್ರಮಕ್ರಮವಾಗಿ ದೇಹವು ಅಳಿಸಿಹೋಗುತ್ತಾ ಬಂತು....ಹಿಂಗಾಲು ಗಳು, ಹೊಟ್ಟೆ, ಮುಂಗಾಲುಗಳು, ಕಿವಿಗಳು, ಕಣ್ಣು, ಬಾಯಿ, ಹಲ್ಲು, ಕೊನೆಗೆ....ಕಿರಿತ! ಬೆಕ್ಕೆಲ್ಲವೂ ಹೋದ ಮೇಲೂ ಅದು ಹಲ್ಲುಕಿರಿಯು ತ್ತಿದ್ದದ್ದು ಮಾತ್ರ ನಾಲ್ಕೈದು ನಿಮಿಷಗಳತನಕ ಹಾಗೆಯೇ ಉಳಿದಿತ್ತು. ಕೊನೆಗೆ, ಅದೂ ಕಾಣಿಸಲಿಲ್ಲ.

---

# ಅಳಿಲ ಸೇವೆ

ಅಳಿಲಿನ ಮನೆಯ ಬಾಗಿಲಿನಲ್ಲಿ ಜವಾನರು ಯಾರೂ ಇರಲಿಲ್ಲ. ಪಾಪಚ್ಚಿ ನೆಟ್ಟನೆ ಮನೆಯನ್ನು ಪ್ರವೇಶಿಸಿದಳು. ಅಲ್ಲಿ ಅಳಿಲೂ ಟೋಪಿ ಅಂಗಡಿಯವನೂ ತಿಂಡಿ ತಿನ್ನುತ್ತಾ ಕುಳಿತಿದ್ದರು. ಇಬ್ಬರನ್ನೂ ಒಟ್ಟಿಗೇ ಕಂಡದ್ದರಿಂದ ಪಾಪಚ್ಚಿಯ ಸಂತೋಷ ಇಮ್ಮಡಿಯಾಯಿತು. ಆದರೆ, ಇಬ್ಬರು ಹುಚ್ಚರೂ ಒಟ್ಟಿಗೆ ಸೇರಿದ್ದಾರೆ. ಏನೇನು ಅನಾಹುತ ವಾಗುತ್ತೋ ಎಂದು ಅವಳಿಗೆ ಕೊಂಚ ದಿಗಿಲು ಬೇರೆ!

ವಿಶಾಲವಾದ ಒಂದು ಕೋಣೆ. ಅದರ ಮಧ್ಯೆ ಒಂದು ದೊಡ್ಡ ಮೇಜು. ಅದರ ಮೇಲೆ ರೊಟ್ಟಿ, ಬೆಣ್ಣೆ, ಉಪ್ಪಿನಕಾಯಿ, ಕಾಫಿ ಇತ್ಯಾದಿ. ಅಲ್ಲಿದ್ದದ್ದು ಒಂದೇ ಕುರ್ಚಿ. ಅದರಲ್ಲಿ ಟೋಪಿಯವನು ಆಗಲೇ ಕುಳಿತು ಬಿಟ್ಟಿದ್ದನು. ತಕ್ಕಮಟ್ಟಿಗೆ ಎತ್ತರವಾದ ಆಳು. "ಕಡ್ಡಿ ಪಯಿಲ್ವಾನ್" ಎಂದು ಅವನನ್ನು ಕರೆಯಬಹುದು. ಒಣಗಿದ ದೇಹ; ಚರ್ಮ, ಮೂಳೆ ಎರಡು ಮಾತ್ರ ಕಾಣುತ್ತಿತ್ತು. ಸದಾ ರೋಗದಲ್ಲಿ ನರಳುತ್ತಿದ್ದನೋ, ಏನೋ? ತಲೆಯ ಮೇಲೆ ಹಳದಿಯ ರುಮಾಲು. ಅದರ ಮೇಲೆ, ಒಂದರ ಮೇಲೊಂದಾಗಿ ಜೋಡಿಸಿದ್ದ ಬಗೆ ಬಗೆಯ ಟೋಪಿಗಳು....ಖದ್ದರ್, ಮಖಮಲ್, ನೋಬೆಲ್, ಅಮಾನುಳ್ಳಾ, ಗಾಂಧಿ, ಫೆಜ್ ಇತ್ಯಾದಿ. ತನ್ನ ಅಂಗಡಿಯನ್ನು ಅವನು ತಲೆಯ ಮೇಲೆ ಹೊತ್ತುಕೊಂಡು ತಿರುಗು ತ್ತಿದ್ದನು. ಮಲಗಿಕೊಳ್ಳುವಾಗ ಈ ಗೋಪುರವನ್ನು ಹೇಗೆ ಕೆಳಕ್ಕಿಳಿ ಸುತ್ತಿದ್ದನೊ ದೇವರೇ ಬಲ್ಲ. ಅಳಿಲಿಗೆ ಕೂರಲು ಕುರ್ಚಿಯಿರಲಿಲ್ಲ. ಆದ್ದರಿಂದ, ಅದು ಒಂದು ಎಮ್ಮೆ ಕರುವಿನ ಮೇಲೆ ಕುಳಿತುಕೊಂಡಿತ್ತು. ಎಮ್ಮೆ ಕರು ತೂಕಡಿಸುತ್ತಾ ಮೆಲುಕುಹಾಕುತ್ತಿತ್ತು. ಕುಳಿತುಕೊಳ್ಳು ವುದಕ್ಕೆ ಇನ್ನೊಂದು ಕುರ್ಚಿಯಿಲ್ಲದಿದ್ದರೂ, ಪಾಪಚ್ಚಿಯನ್ನು ಕಂಡ ಕೂಡಲೆ ಇಬ್ಬರೂ, "ಬನ್ನಿ, ದಯಮಾಡಿಸಿ, ಕೂಡಿ" ಎಂದು ಕೇಳಿ ಕೊಂಡರು. ಉಪಚಾರದ ಮಾತುಗಳು ಒಂದರ ಮೇಲೊಂದು ಬಂದುವು. ಬರಿಯ ಒಣ ಉಪಚಾರ! ಟೋಪಿಯವನು, "ತೆಗೆದುಕೊಳ್ಳಿ" ಎಂದು ಹೇಳಿ ಬಹಳ ವಿನಯದಿಂದ ಒಂದು ತಟ್ಟೆ ತಿಂಡಿಯನ್ನು ಅವಳು ನಿಂತಿದ್ದ ಕಡೆಗೆ ತಳ್ಳುವ ಹಾಗೆ ನಟಿಸಿದನು. ತಿಂಡಿಯಿಲ್ಲ, ತೀರ್ಥವಿಲ್ಲ! ಬರಿಯ ನಟನೆ!

ಅಳಿಲು ಒಂದು ಬಟ್ಟಲು ಕಾಫಿಯನ್ನು ಅವಳ ಮುಂದಿಡುವ ಹಾಗೆ ಮಾಡಿತು. ಪಾಪಚ್ಚಿಯೂ ಅದನ್ನು ಎತ್ತಿ ಕುಡಿಯುವ ಹಾಗೆ ನಟಿಸಿದಳು. ಇನ್ನೇನು ಮಾಡುವುದು? ವಿಧಿಯಿಲ್ಲ. ಹುಚ್ಚರ ಸಹವಾಸ. "ಸಕ್ಕರೆ ಸಾಲದೆ?" ಎಂದು ಟೋಪಿಯವನ ಉಪಚಾರ ಬೇರೆ. "ಏನು! ತುಂಬ ಬಿಸಿಯೇನು? ಕಚ್ಚಿಕೊಂಡು ಕುಡಿಯಬಹುದು. ಅದು ಬೆಳ್ಳಿ ಬಟ್ಟಲು" ಎಂದು ಅಳಿಲಿನ ಉಪಚಾರ. ಪಾಪಚ್ಚಿಗೆ ನಗು ಬಂತು. ಆದರೂ ತಡೆದುಕೊಂಡಳು. "ಏನೋ ಅಳಿಲ ಸೇವೆ" ಎಂದು ಅಳಿಲು ಹೇಳಿತು. "ನನ್ನ ಶಕ್ತ್ಯನುಸಾರ ನಾನೂ ಟೋಪಿ ಹಾಕಿದೆ" ಎಂದು ಟೋಪಿಯವನೂ ಹೇಳಿದನು.

ಕೊಂಚ ಹೊತ್ತು ಎಲ್ಲರೂ ಸುಮ್ಮನಿದ್ದರು. ಪಾಪಚ್ಚಿ ಮೇಜಿನ ಹತ್ತಿರ ನಿಂತೇ ಇದ್ದಳು. ಆಗ ಟೋಪಿಯವನು, "'ಕಾಗೆ ಮರಿಗೆ ಕಾಡಿಗೆ ಹಚ್ಚಿದರೆ ಕಾಡಿಗೆಲ್ಲಾ ಕಾಣುತ್ತೆ' ಅಂದರೆ ಏನು ಅಂತ ಹೇಳಿ" ಎಂದನು. ಒಗಟೆಗಳೆಂದರೆ ಪಾಪಚ್ಚಿಗೆ ಬಹಳ ಉತ್ಸಾಹ. "ನಾನು ಬೇಕಾದರೆ ಹೇಳುತ್ತೇನೆ" ಎಂದು ಅವಳು ಕುಣಿಕುಣಿಯುತ್ತಾ ಹೇಳಿದಳು. ಇದನ್ನು ಕಂಡು ಟೋಪಿಯವನಿಗೆ ಕೋಪ ಬಂತು. "'ಬೇ–ಕಾ–ದ–ರೆ ಹೇ-ಳು-ತ್ತೇ-ನೆ' ಯಾರಿಗೆ ಬೇಕಾದರೆ? ನಿಮಗೋ, ನಮಗೋ?" ಎಂದು ಕೇಳಿದನು. "ಸರಿ! ಪ್ರಾರಂಭವಾಯಿತು" ಎಂದು ಪಾಪಚ್ಚಿ ಅಂದುಕೊಂಡಳು. "ನಿಮಗಾದರೂ ಸರಿಯೆ, ನನಗಾದರೂ ಸರಿಯೆ, ಒಗಟೆಗೆ ಉತ್ತರ ಮುಖ್ಯ! ಅಷ್ಟೇ ತಾನೆ!" ಎಂದು ಹೇಳಿದಳು. "ಹಾಗಲ್ಲ! 'ನಿಮಗೆ ಬೇಕಾದರೆ' ಎಂದರೆ ಒಂದರ್ಥ; 'ನಮಗೆ ಬೇಕಾದರೆ' ಎಂದರೆ ಇನ್ನೊಂದರ್ಥ" ಎಂದು ಟೋಪಿಯವನು ವಾದಿಸಿದನು. ಆಗ ಎಮ್ಮೆಕರು, "ಹೌದು. ಎಂ. ಎ. ಕರು ಎಂದರೆ ಒಂದರ್ಥ; ಕರು ಎಂ. ಎ. ಎಂದರೆ ಇನ್ನೊಂದರ್ಥ" ಎಂದು ಮಧ್ಯೆ ಬಾಯಿಹಾಕಿತು. ತನ್ನ ಒಂದು ಕುರ್ಚಿಯಾಗಿದ್ದ ಪ್ರಾಣಿಗೆ ಅತಿಥಿ ಯಜಮಾನರ ಮಾತಿನ ನಡುವೆ ಬಾಯಿಹಾಕುವಷ್ಟು ದುರಹಂಕಾರ ಬಂದದ್ದನ್ನು ನೋಡಿ ಅಳಿಲಿಗೆ ತುಂಬಾ ರೇಗಿತು. ಅದರ ಮೂಗಿನ ತುದಿಗೆ ಕುದಿಯುತ್ತಿದ್ದ ಕಾಫಿಯನ್ನು ಕೊಂಚ ಹೊಯ್ದು ಅದಕ್ಕೆ ಬುದ್ಧಿ ಕಲಿಸಿತು. "ಪಾಪ! ಮೂಕಪ್ರಾಣಿ!

ಎಷ್ಟು ನೋವಾಯಿತೋ?" ಎಂದು ಹೇಳಿ ಟೋಪಿಯುವನು ಕಣ್ಣೊರಸಿ ಕೊಂಡನು.

ಇವೆಲ್ಲಕ್ಕೂ ಹೆಚ್ಚು ಗಮನಕೊಡದೆ ಪಾಪಚ್ಚಿ ಒಗಟಿಗೆ ಉತ್ತರ ವೇನೆಂದು ಹುಡುಕಾಡುತ್ತಿದ್ದಳು. "ಕಾಗೆಯ ಕಣ್ಣಿಗೆ ಕಾಡಿಗೆ? ಕಾಡಿಗೆಲ್ಲಾ ಕಾಣುತ್ತೆ! ಏನಿರಬಹುದು? ಹುಣ್ಣಿಮೆ ಚಂದ್ರನೇ? ಕೋಳಿ ಮರಿಯೇ? ಕೋಗಿಲೆಯೇ? ಕುದುರೆ ಗಾಡಿಯೇ? ಸೀಮೆಸುಣ್ಣವೇ? ಬೆಣ್ಣೆಯೇ? ಕನ್ನಡಕವೇ?...." ಅಷ್ಟರಲ್ಲೇ ಟೋಪಿಯುವನು, "ಇವತ್ತು ಯಾವ ವಾರ", ಎಂದು ಕೇಳಿದನು. ಯಾರೂ ಉತ್ತರಹೇಳಲಿಲ್ಲ. ಕಡೆಗೆ ಅವನೇ ಜೇಬಿನಿಂದ ಒಂದು ದಪ್ಪ ಗಡಿಯಾರವನ್ನು ತೆಗೆದು ಕಿವಿಗೆ ಹಿಡಿದು ನೋಡಿ ಅದು ನಡೆಯುತ್ತಿಲ್ಲವೆಂದು ಗೊತ್ತಾದಾಗ, ಅದನ್ನು ಒಂದು ಬಟ್ಟಲು ಕಾಫಿಯೊಳಗೆ ಅದ್ದಿ ಸರಿಪಡಿಸಿದನು! ಆ ಗಡಿಯಾರ ವಾರವನ್ನು ಮಾತ್ರ ತೋರಿಸುತ್ತಿತ್ತು. ಗಂಟೆ, ನಿಮಿಷ ಇವುಗಳೊಂದನ್ನೂ ತೋರಿಸುವಂತೆ ತಯಾರಾಗಿರಲಿಲ್ಲ. ಬರಿಯ ವಾರವನ್ನು ಮಾತ್ರ ತೋರಿಸುತ್ತಿತ್ತು. "ಇಂಥಾ ಗಡಿಯಾರ ಸಾಕೆ? ನಿಮಗೆಲ್ಲರಿಗೂ ಹೊತ್ತು ತಿಳಿಯಬೇಡವೆ?" ಎಂದು ಪಾಪಚ್ಚಿ ಕೇಳಿದಳು. "ಬೇಕಿಲ್ಲ. ನಮಗೆ ಯಾವಾಗಲೂ ಮಧ್ಯಾಹ್ನ ಮೂರು ಗಂಟೆ ಸಮಯವೇ! ನಮಗೆ ಯಾವಾಗಲೂ ತಿಂಡಿತಿನ್ನುವ ಹೊತ್ತು. ಆದ್ದರಿಂದ, ವಾರ ಒಂದು ಗೊತ್ತಾದರೆ ಸಾಕಾಗಿದೆ." ಎಂದು ಅಳಿಲು ಹೇಳಿತು. "ಯಾವಾಗಲೂ ತಿಂಡಿ ತಿನ್ನುತ್ತಿರುವುದಕ್ಕೆ ಹಸಿವಾಗಬೇಡವೆ?" ಎಂದು ಪಾಪಚ್ಚಿ ವಿಚಾ ರಿಸಿದಳು. "ಏನು, ತಿಂಡಿ ತಿನ್ನುವುದಕ್ಕೆ ಹೊಟ್ಟೆಯಿದ್ದರೆ ಸಾಲದೆ? ಹಸಿವೂ ಬೇಕೆ? ಇದೀಗ ಹೊಸ ವಿಷಯ", ಎಂದು ಟೋಪಿಯುವನು ಆಶ್ಚರ್ಯದಿಂದ ಹೇಳಿದನು. "ಆದಿರಲಿ! ಒಗಟಿಗೆ ಉತ್ತರ ಕಂಡುಹಿಡಿ ದಿರಾ?" ಎಂದು ಅಳಿಲು ಪಾಪಚ್ಚಿಯನ್ನು ಕೇಳಿತು. "ನಾನು ಸೋತೆ. ನನಗೆ ಯಾವುದೂ ತೋರಲಿಲ್ಲ. ಇನ್ನೊಂದಕ್ಕೆ ನಾನು ಹೇಳುತ್ತೇನೆ. ಇದರ ಉತ್ತರ ನೀವೇ ಹೇಳಿ" ಎಂದು ಪಾಪಚ್ಚಿ ತಾಳ್ಮೆಯಿಂದ ಕೇಳಿ ಕೊಂಡಳು. ಆದರೆ, "ನನಗೂ ಗೊತ್ತಿಲ್ಲ" ಎಂದು ಅಳಿಲೂ "ನನಗೆ ಮೊದಲೇ ತಿಳಿಯದು" ಎಂದು ಟೋಪಿಯುವನೂ ಹೇಳಿಬಿಟ್ಟರು.

ಸುಮ್ಮನೆ ಅರ್ಥವಿಲ್ಲದ ಒಗಟೆ ಹೇಳಿ ತನ್ನನ್ನು ಹೀಗೆ ಹಾಸ್ಯ ಮಾಡಿದ್ದಕ್ಕಾಗಿ ಪಾಪಚ್ಚಿಗೆ ತುಂಬಾ ಕೋಪಬಂತು. ಅವರಿಬ್ಬರನ್ನೂ ಚೆನ್ನಾಗಿ ಬೈದು ಬಿಡೋಣವೆನ್ನಿಸಿತು.

ಆದರೆ, ಅಷ್ಟು ಹೊತ್ತಿಗೆ ಸರಿಯಾಗಿ ಎಮ್ಮೆ ಕರುವಿಗೆ ಹೊರೆ ಹೊತ್ತುಕೊಂಡು ನಿಂತು ನಿಂತು ಕಾಲು ಸೋತುಹೋಗಿ ಅದು ಥಟಕ್ಕನೆ ಮಲಗಿಬಿಟ್ಟಿತು. ಅಕಸ್ಮಾತ್ ಆದ ಈ ಅನಾಹುತದಿಂದ ಅಳಿಲಿಗೆ ಬಹಳ ಗಾಬರಿಯಾಯಿತು. ಪಾಪಚ್ಚಿಗೆ ನಗುಬಂತು. ಟೋಪಿಯುವನೂ ತನ್ನ ಎರಡು ಪಕ್ಕೆಗಳನ್ನೂ ಹಿಡಿದುಕೊಂಡು ನಗುವುದಕ್ಕೆ ಮೊದಲು ಮಾಡಿದನು. ಬರಬರುತ್ತಾ ಅವನ ನಗು ಹೆಚ್ಚಿತು. ತಲೆಯ ಮೇಲಿದ್ದ ಅವನ ಟೋಪಿ ಅಂಗಡಿ ತೂರಾಡುತ್ತಾ, ತೂರಾಡುತ್ತಾ, ಈಗಲೋ, ಆಗಲೋ, ಯಾರ ಮೇಲೋ ಬೀಳುವ ಹಾಗಿತ್ತು. ಸುಮಾರು ಅರ್ಧ ಗಂಟೆಯಾದಮೇಲೆ ಅವನ ನಗು ಹತೋಟಿಗೆ ಬಂತು. ಗೋಪುರ ಹಿಂದಿನಂತೆ ನೆಟ್ಟಗೆ ನಿಂತುಕೊಂಡಿತು.

ಹುಚ್ಚರಿಬ್ಬರೂ ಪಾಪಚ್ಚಿಯ ಕಡೆ ತಿರುಗಿ, "ಅಮ್ಮಾ! ಒಂದು ಕಥೆ ಹೇಳಿ" ಎಂದು ಬೇಡಿದರು. ಒಗಟೆಯಿಂದಾದ ಅವಮಾನಕ್ಕೆ ಅವಳು ಇನ್ನೂ ಮುನಿಸಿಕೊಂಡಿದ್ದಳು, ಕೋಪ ಇಳಿದಿರಲಿಲ್ಲ. ಆದ್ದರಿಂದ, ಪಾಪಚ್ಚಿ 'ಒಲ್ಲೆ' ಎಂದಳು. "ಹಾಗಾದರೆ, ಲೋ, ಕುಂಭಕರ್ಣ, ನೀನು ಹೇಳೋ! ನಿನ್ನ ತಾತ ಹೇಳುತ್ತಿದ್ದ ಕಥೆಗಳಲ್ಲೊಂದೂ ಜ್ಞಾಪಕ ವಿಲ್ಲವೇನೋ?" ಎಂದು ಕೇಳಿ ಟೋಪಿಯುವನು ಎಮ್ಮೆ ಕರುವನ್ನು ಎಬ್ಬಿಸಿ ಹಿಡಿದು ನಿಲ್ಲಿಸಿದನು.

ಕರು—"ಒಂದಾನೊಂದು ಊರಿನಲ್ಲಿ ಮೂರು ಜನ ಅಕ್ಕ ತಂಗಿಯ ರಿದ್ದರು: ಅವರ ಹೆಸರು ಶಿಂಗಿ, ರಂಗಿ, ಲಿಂಗಿ. ಅವರು ಒಂದು ಬಾವಿ ಯೊಳಗೆ ಮನೆಮಾಡಿಕೊಂಡು ಸುಖವಾಗಿದ್ದರು."

ಪಾಪಚ್ಚಿ—"ಅಲ್ಲಿ ಅವರಿಗೆ ಆಹಾರ?"

ಕರು—"ಅಲ್ಲಿ ಅವರು ಮೂರು ಹೊತ್ತೂ ತುಪ್ಪ ಕುಡಿದು ಜೀವಿಸುತ್ತಿದ್ದರು."

ಪಾಪಚ್ಚಿ—"ಅದು ಹೇಗೆ? ಬರೀ ತುಪ್ಪ ಕುಡಿದು ಹೊಟ್ಟೆ ತುಂಬಿಸಿಕೊಂಡರೆ ಖಾಯಿಲೆ ಬರುತ್ತದೆ, ಅಷ್ಟೆ."

ಕರು—"ಹೌದು! ಅವರೆಲ್ಲರಿಗೂ ಯಾವಾಗಲೂ ತಡೆಯಲಾರದ ಹೊಟ್ಟೆ ನೋವು!"

ಪಾಪಚ್ಚಿ—"ಇರಲಿ, ತುಪ್ಪ ಕುಡಿಯಬೇಕಾಗಿದ್ದರೆ, ಅವರು ಬಾವಿಯೊಳಗೆ ಏನು ಮಾಡುತ್ತಿದ್ದರು?"

ಕರು—"ಓ! ನಾನು ಹೇಳುವುದಕ್ಕೆ ಮರೆತಿದ್ದೆ. ಅದು ತುಪ್ಪದ ಬಾವಿ!"

ಪಾಪಚ್ಚಿ—"ಎಲ್ಲ ಸುಳ್ಳು! ಅಂಥಾದ್ದೊಂದು ಬಾವಿಯೇ ಇಲ್ಲ."

ಪಾಪಚ್ಚಿಗೆ ಇದೊಂದು ಕೆಟ್ಟ ಸ್ವಭಾವ ನೋಡಿ: ಪ್ರಶ್ನೆ ಹಾಕುವುದು. ಯಾರಾದರೂ ಕಥೆ ಹೇಳುತ್ತಿದ್ದರೆ ನಿಧಾನವಾಗಿ ಕೇಳಬೇಕು, ಸಲ ಸಲಕ್ಕೂ ಕೊಕ್ಕೆಹಾಕಬಾರದು, ಅಡ್ಡಮಾತನ್ನಾಡಬಾರದು. 'ಹುಂ'ಗುಟ್ಟುತ್ತಾ ಮುಂದು ಮುಂದಕ್ಕೆ ಹೋಗಬೇಕು. ಆಗ ಕಥೆಯ ಸ್ವಾರಸ್ಯ ಕೆಡುವುದಿಲ್ಲ. ಕೇಳುವವರಿಗೂ ಹೇಳುವವರಿಗೂ ಉತ್ಸಾಹವಿರುತ್ತದೆ. ಇತರರಿಗೆ ನಮ್ಮ ಪ್ರಶ್ನೆಗಳು ಅನೇಕ ವೇಳೆ ರುಚಿಸುವುದಿಲ್ಲ. ಪ್ರಶ್ನೆ ಕೇಳಿದರೆ ಅವರು ಮೇಲೆ ಬೀಳುತ್ತಾರೆ.

ಅಳಿಲ ಮನೆಯಲ್ಲಿಯೂ ಆ ದಿನ ಹಾಗೆಯೇ ಆಯಿತು. ಟೋಪಿಯವನಿಗೆ ತುಂಬಾ ರೇಗಿತು. ಪಾಪಚ್ಚಿಯನ್ನು ಬಹಳವಾಗಿ ಬೈದನು. "ಇಲ್ಲ, ಇಲ್ಲ, ಕ್ಷಮಿಸಿ, ಇನ್ನುಮುಂದೆ ನಾನು ತೆಪ್ಪಗಿರುತ್ತೇನೆ" ಎಂದು ಪಾಪಚ್ಚಿ ಅನೇಕಸಲ ಹೇಳಿ ಕೈಮುಗಿದಳು. ಕಡೆಗೆ—

ಪಾಪಚ್ಚಿ—"ಅಂಥಾದ್ದೊಂದು ಬಾವಿ ಇದ್ದಿರಬಹುದು.... ಈಗಲೂ ಇರಬಹುದು."

ಕರು—"ಒಂದೇ? ಸಾವಿರ ಬಾವಿ ಇವೆ! ತಿಳಿಯಿತೋ?"

ಪಾಪಚ್ಚಿ—"ಇವೆ. ಒಪ್ಪಿದೆ. ಕಥೆಯನ್ನು ಮುಂದುವರಿಸಿ."

ಕರು—"ರಂಗಿ, ಶಿಂಗಿ, ಲಿಂಗಿ ಎಂಬ ಮೂರು ಜನ ಹೆಂಗಸರೂ ಅಲ್ಲಿ ಯಾವಾಗಲೂ ಸೇದುತ್ತಾಯಿದ್ದರು."

ಪಾಪಚ್ಚಿ (ತನ್ನ ಪ್ರತಿಜ್ಞೆಯನ್ನು ಮರೆತು)—"ಏನನ್ನು ಸೇದುತ್ತಿದ್ದರು?"

ಕರು—"ತುಪ್ಪವನ್ನ."

ಪಾಪಚ್ಚಿ (ಅನುಮಾನಿಸುತ್ತ)—"ಅದು ಹೇಗೆ?"

ಕರು—"ಅಷ್ಟು ಗೊತ್ತಿಲ್ಲವೆ? ನೀರಿನ ಬಾವಿಯಿಂದ ನಾವು ಏನನ್ನು ಸೇದುತ್ತೇವೆ?"

ಪಾಪಚ್ಚಿ—"ನೀರನ್ನ."

ಕರು—"ಸರಿ! ಆ ಬಾವಿಯೊಳಗೆ ಇದ್ದದ್ದು ತುಪ್ಪ. ಆದ್ದರಿಂದ ಅದನ್ನು ಸೇದುತ್ತಿದ್ದರು."

ಪಾಪಚ್ಚಿ—"ಆದರೆ, ಅವರು ಬಾವಿಯ **ಒಳಗೆ** ವಾಸವಾಗಿದ್ದರಲ್ಲಾ?"

ಕರು—"ಹೌದು! ಒಳಗಿನಿಂದ ತಾನೇ ಸೇದಬೇಕು!"

ಪಾಪಚ್ಚಿ (ಅಸಮಾಧಾನದಿಂದ)—"ನನಗೆ ಅದು ಅರ್ಥವಾಗಲಿಲ್ಲ."

ಪಾಪಚ್ಚಿಯ ನಡತೆಯಿಂದ ಮತ್ತೆ ಅಳಿಲಿಗೂ ಟೋಪಿಯವನಿಗೂ ಕೋಪಬಂತು. "ಅರ್ಥವಾಗದಿದ್ದರೆ ಬಿಡಿ! ಅದರಿಂದ, ಅನರ್ಥವೇನೂ ಇಲ್ಲ" ಎಂದು ಹೇಳಿ ಟೋಪಿಯವನು ನಕ್ಕನು.

ಪಾಪಚ್ಚಿಗೆ ಬಹಳ ಅವಮಾನವಾಯಿತು. ಮುನಿಸಿಕೊಂಡು ಹೊರಟೇಹೋದಳು. ಅವಳ ಕೋಪಕ್ಕೆ ಯಾರೂ ಲಕ್ಷ್ಯಕೊಡಲಿಲ್ಲ. ಯಾರೂ ಹಿಂದಕ್ಕೆ ಕರೆಯಲೇ ಇಲ್ಲ. "ಥೂ. ಈ ಹುಚ್ಚರ ಮನೆಗೆ ಬರಲೇ ಬಾರದಾಗಿತ್ತು" ಎಂದು ಹೇಳಿಕೊಂಡಳು.

ಆಗ, ಅವಳೆದುರಿಗಿದ್ದ ಒಂದು ಮರದ ಬುಡದಲ್ಲಿ ಚಚ್ಚೌಕವಾದ ಬಾಗಿಲಿದ್ದಂತೆ ಕಂಡಿತು. ಒಳಗೆ ಹೋಗಿ ಅದನ್ನು ತಳ್ಳಿದಳು. ಅದು

ತೆರೆಯಿತು. ಧೈರ್ಯವಾಗಿ ಅದರೊಳಕ್ಕೆ ನುಗ್ಗಿದಳು. ಕೊಂಚ ದೂರ ಹೋದ ಮೇಲೆ ರಸ್ತೆ ಬಲಕ್ಕೆ ತಿರುಗಿತು.

ಅಲ್ಲಿ, ಹಿಂದಿನ ಗಾಜಿನ ಗುಂಡು ಮೇಜು. ಚಿನ್ನದ ಬೀಗದಕೈ. ತೋಟದ ಬಾಗಿಲು!

"ಆಗಿನ ಹಾಗೆ ಈಗ ಅಳಬೇಕಾಗಿಲ್ಲ" ಎಂದು ಹೇಳುತ್ತಾ ಅಣಬೆಯ ಚೂರುಗಳಿಂದ ತನ್ನ ಎತ್ತರವನ್ನು ಕಡಮೆ ಮಾಡಿಕೊಂಡು, ಬಾಗಿಲ ಸಂದಿನಿಂದಲೇ ತೂರಿಕೊಂಡು, ಮತ್ತೆ ಮೊಳದಷ್ಟು ಎತ್ತರಕ್ಕೆ ತನ್ನ ದೇಹವನ್ನು ತಂದುಕೊಂಡಳು.

ಅಂತು, ಕೊನೆಗೆ, ಆ ಉದ್ಯಾನವನ್ನು ಪ್ರವೇಶಿಸಿದಳು. ಅಲ್ಲಿ ತಂಪಾದ ಗಾಳಿ. ಇಂಪಾಗಿ ಹಾಡುವ ಬಣ್ಣದ ಹಕ್ಕಿಗಳು!

---

## ಇಸ್ಪೀಟು ರಾಣಿ

ಬಣ್ಣಿಸಲಾರದ ಬಣ್ಣಗಳು; ಹುಚ್ಚು ಹುಚ್ಚಾಗಿ ಬೆಳೆದ ಹುಲ್ಲು; ಹಣ್ಣಿನ ಭಾರವನ್ನು ಹೊರಲಾರದೆ "ತೆಗೆದುಕೊಳ್ಳಿ, ನನ್ನ ತಲೆ ಹೊರೆ ಕೊಂಚ ಇಳಿಸಿಕೊಡಿ" ಎಂದು ಅಂಗಲಾಚಿ ಬೇಡುವ ಮರಗಳು. ಅದು ವರೆಗೂ ಅನುಭವಿಸಿದ ಕಷ್ಟಗಳೆಲ್ಲವನ್ನೂ ಪಾಪಚ್ಚಿ ಬೇಗನೆ ಮರೆತು ಬಿಟ್ಟಳು.

ಅವಳು ಆ ತೋಟದಲ್ಲಿ ಕುಣಿಯುತ್ತಾ ಹಾಡುತ್ತಾ ಓಡಾಡುತ್ತಿದ್ದಳು....ಅಲ್ಲಿ, ಎತ್ತರವಾಗಿ ಬೆಳೆದಿದ್ದ ಒಂದು ಬಿಳಿಯ ಗುಲಾಬಿ ಗಿಡ. ಅದರ ತುಂಬ ಅಗಲವಾದ ಹೂವುಗಳ ಗೊಂಚಲುಗಳು. ಆ ಗಿಡದ ಶುಶ್ರೂಷೆಯನ್ನು ಮೂರು ಆಳುಗಳು ಅತಿ ಜಾಗರೂಕತೆಯಿಂದ ಮಾಡುತ್ತಿದ್ದರು. ಪ್ರತಿಯೊಂದು ಹೂವಿನ ಎಸಳಿಗೂ ಅವರು ಕೆಂಪು ಬಣ್ಣವನ್ನು ಬಳಿಯುತ್ತಿದ್ದರು! ಪಾಪಚ್ಚಿ ಆ ಗಿಡದ ಹತ್ತಿರ ಹೋಗಿ ಜವಾನರ ವಿಚಿತ್ರ ಕೆಲಸವನ್ನು ನೋಡುತ್ತಾ ನಿಂತಿದ್ದಳು. ಆಗ ಒಬ್ಬ ಆಳು—"ಲೋ, ಐದು! ಎಲೆಯ ಮೇಲೆ ಬೀಳಿಸಬೇಡ. ಜೋಕೆ."

ಐದು—"ನಾನೇನು ಮಾಡಲಣ್ಣಾ! ಏಳು ನನ್ನ ಕೈ ತಟ್ಟಿದ. ಒಂದಿಷ್ಟು ಚೆಲ್ಲಿಬಿಟ್ಟಿತು!"

ಏಳು (ಕೋಪದಿಂದ)—"ಲೋ! ನಿನ್ನ ಹಣೇಬರಹವೇ ಅಷ್ಟು! ಇನ್ನೊಬ್ಬನ ಮೇಲೆ ಚಾಡಿ ಹೇಳಿಕೊಂಡು ನಿನ್ನ ಹೊಟ್ಟೆ ತುಂಬಿಸಿಕೋ!"

ಐದು (ಕುಪಿತನಾಗಿ)—"ಮುಚ್ಚೋ! ಕಂಡಿದೇನೆ. ಬಗುಳಬೇಡ. ಆಯಿತು. ನಿನ್ನ ಗತಿ ಪೂರೈಸಿತು ಇವತ್ತು. ಯಮರಾಯನ ಪಟ್ಟಣಕ್ಕೆ ಚೀಟಿಕೊಟ್ಟು ಕಳುಹಿಸುತ್ತಾರೆ....ಕೇಳಿಲ್ಲವೋ, ನೀನಿನ್ನೂ? ನಿನ್ನೆ ಸಾಯಂಕಾಲ....ಸನ್ನಿಧಾನದಿಂದ ಅಪ್ಪಣೆಯಾಗಿದೆ....ಅಮಾಸೆ ದಿನ ನಿನ್ನ ತಲೆ ಕತ್ತರಿಸಬೇಕು ಅಂತ...."

ಮೊದಲು ಮಾತನಾಡಿದವನು—"ಅದು ಯಾಕಣ್ಣಾ?"

ಏಳು—"ಲೋ, ಎರಡು! ನಿನಗ್ಯಾಕೆ ಅದೆಲ್ಲಾ? ನಿನ್ನ ತಲೆ ಹೋಗುವ ಸಂದರ್ಭ ಏನೂ ಇಲ್ಲವಲ್ಲಾ. ನಾನು ಸತ್ತರೆ ನಿನಗೆ ವಡೆ ಪಾಯಸ ಕೂಡ ಸಿಕ್ಕುವುದಿಲ್ಲ. ಸುಮ್ಮನೆ ನಿನ್ನ ಪಾಡಿಗೆ ಬಣ್ಣ ಬಳಿ."

ಐದು—"ನಾನು ಹೇಳುತ್ತೇನಣ್ಣಾ, ಯಾಕೆ ಅಂತ. ಎಲ್ಲರಿಗೂ ಗೊತ್ತಾಗಿದೆ, ಆಗಲೇ. ನಿನ್ನ ಕಿವಿಗೆ ಇನ್ನೂ ಮುಟ್ಟಿಲ್ಲ, ಅಷ್ಟೆ. ನಿನ್ನೆ ಅರಮನೆ ಅಡಿಗೆಯವನು ಏಳನ್ನು ಕರೆದು ಕೊಂಚ ಕರಿಬೇವಿನಸೊಪ್ಪು ತೆಗೆದುಕೊಂಡು ಬಾ ಎಂದು ಹೇಳಿದ. ಅದಕ್ಕಿವನು, ಎಲ್ಲೋ ಜ್ಞಾನದಲ್ಲಿ ನೆಟ್ಟಗೆ ಹೋಗಿ ಬೇವಿನಸೊಪ್ಪು ಕಿತ್ತುಕೊಂಡು ಬಂದು ಕೊಟ್ಟ. ಆ ದಡ್ಡ ಅದನ್ನ ಸಾರಿಗೆ ಹಾಕಿಯೇಬಿಟ್ಟ.

ಏಳು (ತನ್ನ ಪೆಚ್ಚುತನ ಬಯಲಾದದ್ದರಲ್ಲಿ ಕೋಪಗೊಂಡು)—"ಯಾಕೋ ಹೇಳಿದೆ? ನಿನ್ನ ಹಲ್ಲುದುರಿಸಿ....ಚರ್ಮ ಸುಲಿದು.... ಮೂಗು ಕೊಯ್ದು...."

ಅಷ್ಟರಲ್ಲಿ ಅವರು ಪಾಪಚ್ಚಿಯನ್ನು ಕಂಡರು. ತಮ್ಮ ಜಗಳವನ್ನು ನಿಲ್ಲಿಸಿ ಸುಮ್ಮನಾದರು. ಎಲ್ಲರೂ ಅವಳಿಗೆ ಕೈಮುಗಿದರು. ಅಡ್ಡಬಿದ್ದರು. "ತಪ್ಪಾಯಿತು, ಬುದ್ಧಿ! ನಿಮ್ಮ ಪಾದ! ತಪ್ಪಾಯಿತು ಬುದ್ಧಿ" ಎಂದು ಹೇಳಿದರು.

"ಹೂವುಗಳಿಗೆ ಯಾಕೆ ಬಣ್ಣ ಹಾಕುತ್ತಿದ್ದೀರಿ?" ಎಂದು ಪಾಪಚ್ಚಿ ಕೇಳಿದಳು. ಐದು, ಏಳು—ಇವರಿಬ್ಬರೂ ಯುದ್ಧಕ್ಕೆ ಅಣಿಯಾಗಿದ್ದದ್ದರಿಂದ, ಅವರ ಆವೇಶವು ಇನ್ನೂ ತಗ್ಗಿರಲಿಲ್ಲ. ಆದುದರಿಂದ, ಎರಡು, "ನೋಡಿ, ಬುದ್ಧಿ! ಇಲ್ಲಿ ಒಂದು ಕೆಂಪು ಗುಲಾಬಿಯನ್ನು ನೆಡಬೇಕಾಯಿತು, ಬುದ್ಧಿ! ಅದು ತಪ್ಪಿ ಬಿಳಿಯದನ್ನು ಹಾಕಿಬಿಟ್ಟೆವು, ಬುದ್ಧಿ! ರಾಣಿಯವರ ಸನ್ನಿಧಾನಕ್ಕೆ ಇದು ತಿಳಿದರೆ ನಮ್ಮನ್ನು ಪ್ರಾಣಸಹಿತ ಬಿಡುವುದಿಲ್ಲ, ಬುದ್ಧಿ. ಇನ್ನೇನು, ಇನ್ನೊಂದರಗಳಿಗೆಯಲ್ಲಿ ಇಲ್ಲಿಗೇ ಚಿತ್ತೈಸುತ್ತಾರೆ, ಬುದ್ಧಿ. ಅದಕ್ಕೇ, ಆದಷ್ಟು ಬೇಗೆ ಬಣ್ಣ ಹಾಕುತ್ತಿದೇವೆ, ಬುದ್ಧಿ!" ಎಂದು ಹೇಳಿದನು. ಆಗ, ಐದು "ಸವಾರಿ! ಸವಾರಿ! ಎಂದು ಕಿರಿಚಿದನು. ಮೂವರೂ ನೆಲದ ಮೇಲೆ ದಂಡಪ್ರಣಾಮ ಮಾಡಿದರು. ಹಾಗೆಯೇ ಬಿದ್ದಿದ್ದರು.

ಕೊಂಬು ಕಹಳೆಗಳ ಸದ್ದಾಯಿತು. ಜನರ ಗದ್ದಲ ಕೇಳಿಸಿತು. ಪಾಪಚ್ಚಿ ಆಕಡೆ ತಿರುಗಿನೋಡಿದಳು. ಹತ್ತುಜನ ಗಿರಲುಮೀಸೆಯ ಸಿಪಾಯಿಗಳು ಒಂದು ಸಾಲಿಗೆ ಇಬ್ಬಿಬ್ಬರಂತೆ ಮೊದಲು ಬಂದರು. ಅವರೆಲ್ಲರೂ ಕಳಾವರಿನ ಆಕಾರದಲ್ಲಿ ಕತ್ತರಿಸಿದ ಕಪ್ಪು ರಟ್ಟಿನ ತುಂಡುಗಳನ್ನು ಕೋಲುಗಳಿಗೆ ಸಿಕ್ಕಿಸಿ ಎತ್ತಿಹಿಡಿದು ಭರ್ಜಿಗಳಂತೆ ತರುತ್ತಿದ್ದರು. ಅನಂತರ, ಇಪ್ಪತ್ತು ಜನ ಹೊಗಳುಭಟ್ಟರು, ನಾಲ್ವರು ನಾಲ್ವರಾಗಿ ಐದು ಸಾಲು. ಅವರ ಹಿಂದೆಯೇ, ಆಸ್ಥಾನದ ಅಧಿಕಾರಿಗಳು, ಉದ್ದವಾದ ಬಿಳಿಯ ಅಂಗಿ, ನೀಲಿ ರುಮಾಲು, ಸೊಂಟಕ್ಕೆ ಕೆಂಪು ಪಟ್ಟಿ. ರುಮಾಲಿನ ಮೇಲೂ ಅಂಗಿಯ ಮೇಲೂ ಡೈಮಂಡಿನ ಆಕಾರದಲ್ಲಿ ಕೆಂಪು ಮುದ್ರೆಗಳು. ಆಮೇಲೆ ಬಂದವರು ಹತ್ತು ಜನ ಅಂಗರಕ್ಷಕರು. ಇವರೂ ಸಿಪಾಯಿಗಳಂತೆಯೇ ರಟ್ಟಿನ ತುಂಡುಗಳನ್ನು ಝುಳಪಿಸುತ್ತಾ ಬಂದರು; ಆದರೆ, ಕೆಂಪು ಬಣ್ಣದ ರಟ್ಟು, ಆಠೀನ್ ಆಕಾರ! ಅವರ ಹಿಂದೆ ವಾದ್ಯದವರು. ಅನಂತರ, ಅರಸುಮಕ್ಕಳು. ಒಂದು ಸಾಲಿಗೆ ಇಬ್ಬಿಬ್ಬರಂತೆ, ಒಬ್ಬರ ಕೈಯನ್ನೊಬ್ಬರು ಹಿಡಿದುಕೊಂಡು ಕುಣಿಕುಣಿಯುತ್ತಾ ನಗು ನಗುತ್ತಾ ಬರುತ್ತಿದ್ದರು. ಅವರಿಗೆ ಹೊಳೆಯುವ ಕಣ್ಣುಗಳು. ಕನ್ನಡಿಯಂತೆ ಕೆನ್ನೆಗಳು; ಕೆಂದುಟಿಗಳು. ಮುದ್ದಾದ ಮಕ್ಕಳು. ಮೈಮೇಲೆ ಥಳ

ಥಳಿಸುವ ಒಡವೆ ವಸ್ತ್ರಗಳು. ಅವರ ಅಂಗಿಗಳ ಮೇಲೂ ರುಮಾಲುಗಳ ಮೇಲೂ ಅಲ್ಲಲ್ಲಿ ಇಸ್ಪೀಟಿನ ಆಕಾರದಲ್ಲಿ ಕಪ್ಪು ಬಣ್ಣದ ಮುದ್ರೆಗಳು. ಅವರ ಹಿಂದೆಯೇ, ಅರಮನೆಗೆ ಅತಿಥಿಗಳಾಗಿ ದಯಮಾಡಿಸಿದ್ದ ನೆರೆಹೊರೆ ಸಂಸ್ಥಾನಗಳ ರಾಜರು, ಅವರ ಅರಸಿಯರು, ಮಂತ್ರಿ ಪ್ರಧಾನರು, ದಂಡ ನಾಯಕರು; ಕೆಲವು ಸಾಮಂತರಾಜರು, ಅವರ ಪತ್ನಿಯರು. (ಅವರ ನಡುವೆ ಎಲ್ಲರೊಂದಿಗೂ ಬಹಳ ವಿನಯದಿಂದ ಮಾತನಾಡುತ್ತಾ ಬಿಳಿಯ ಮೊಲವೂ ಬರುತ್ತಿತ್ತು.) ಅನಂತರ, ಕೊಂಚ ಹಿಂದೆ, ಒಬ್ಬನೇ,.... ಇಸ್ಪೀಟು ಗುಲಾಮನ ಉಡಿಗೆ ತೊಡಿಗೆಗಳನ್ನು ಧರಿಸಿದ್ದ ಪ್ರಧಾನಮಂತ್ರಿ! ಆಮೇಲೆ, ತಮ್ಮ ಕರುಣಾ ಕಟಾಕ್ಷವನ್ನು ಅತ್ತಿತ್ತ ಬೀರುತ್ತಾ, ಪ್ರಜೆಗಳ ಪುರೋಭಿವೃದ್ಧಿಗಾಗಿ ಮಾಡಬೇಕಾದ ಕೆಲಸಗಳನ್ನು ಕುರಿತು ತಮ್ಮೊಳಗೆ ತಾವೇ ಮಾತನಾಡಿಕೊಳ್ಳುತ್ತಾ ಬರುತ್ತಿದ್ದ ಇಸ್ಪೀಟು ರಾಜಾ, ಪಕ್ಕದಲ್ಲೇ, ಇಸ್ಪೀಟು ರಾಣಿ !!

ಇತರರ ಹಾಗೆ ತಾನೂ ಕೆಳಮುಖವಾಗಿ ನೆಲದಮೇಲೆ ಮಲಗಿಕೊಳ್ಳಬೇಕೇನೋ ಎಂದು ಪಾಪಚ್ಚಿಗೆ ಶಂಕೆಯಾಯಿತು. ಆದರೆ, ರಾಜನೂ ರಾಣಿಯೂ ಇಷ್ಟು ವೈಭವದಿಂದ ಬಿಜಯಮಾಡುತ್ತಿರುವಾಗ ಎಲ್ಲರೂ ತಲೆಯೆತ್ತದೆ ದಾರಿಯುದ್ದಕ್ಕೂ ಮಲಗಿಬಿಟ್ಟರೆ ಮೆರವಣಿಗೆಯಿಂದ ಏನು ಪ್ರಯೋಜನ ಎಂದು ಯೋಚಿಸಿ, ಅಂತಹ ನಡವಳಿಕೆ ಎಲ್ಲರಿಗೂ ಅನ್ವಯಿಸತಕ್ಕದ್ದಲ್ಲವೆಂದು ತೀರ್ಮಾನಿಸಿ ಅಲ್ಲಿಯೇ ನಿಂತುಕೊಂಡಿದ್ದಳು.

ಹತ್ತಿರಕ್ಕೆ ಸವಾರಿ ಬಂದಾಗ ರಾಣಿಯವರ ದೃಷ್ಟಿ ಪಾಪಚ್ಚಿಯ ಮೇಲೆ ಬಿತ್ತು. ಅವಳೆದುರಿಗೆ ರಾಜನೂ ರಾಣಿಯೂ ನಿಂತುಕೊಂಡರು. ರಾಣಿಯವರು ಕೊಂಚ ಹೊತ್ತು ಅವಳನ್ನು ದುರುದುರನೆ ನೋಡುತ್ತಿದ್ದರು. ಕೊನೆಗೆ ಮಂತ್ರಿಯನ್ನು ಕರೆತರಿಸಿ, "ಇದು ಯಾರು?" ಎಂದು ಕೇಳಿದರು. ಅವನು—ಪಾಪ, ಏನೂ ತಿಳಿಯದು—ಕಣ್ ಕಣ್ ಬಿಟ್ಟ; ಕೊಂಚ ಕೆಮ್ಮಿ, ತಲೆ ಕೆರೆದು, ಕೊನೆಗೆ, ಸುಮ್ಮನಾದನು. "ಕತ್ತೆ" ಎಂದು ರಾಣಿಯವರು ಅವನಿಗೆ ಆಶೀರ್ವಾದ ಮಾಡಿದರು. ಅನಂತರ ಪಾಪಚ್ಚಿಯನ್ನು ಕುರಿತು, "ನಿನ್ನ ಹೆಸರೇನು, ಮಗೂ" ಎಂದು ಕೇಳಿದಳು. ಪಾಪಚ್ಚಿಗೆ ಮೊದಮೊದಲು ರಾಜನನ್ನೂ, ರಾಣಿಯನ್ನೂ, ಪರಿವಾರವನ್ನೂ

ಕಂಡಾಗ ಕೊಂಚ ದಿಗಿಲಾಗಿತ್ತು. ಆದರೆ, ಅವಳು ಹಾಗೆಲ್ಲಾ ಹೆದರುವ ಹುಡುಗಿಯಲ್ಲ. "ಅಣ್ಣನ ಬೀರುವಿನಲ್ಲಿದ್ದ ಇಸ್ಪೀಟು ಕಟ್ಟಿನ ಗೊಂಬೆಗಳ ಹಾಗಿವೆ. ಇವಕ್ಕೆ ನಾನು ಏಕೆ ಹೆದರಬೇಕು?" ಎಂದು ಹೇಳಿ ಮನಸ್ಸಿಗೆ ಧೈರ್ಯತಂದುಕೊಂಡು, "ಮಹಾಸ್ವಾಮಿ! ನನ್ನ ಹುಟ್ಟು ಹೆಸರು ಪಾರ್ವತಮ್ಮ; ಇಟ್ಟ ಹೆಸರು, ಪಾಪಚ್ಚಿ" ಎಂದಳು. "ಸರಿ! ಇವರು ಯಾರು ಇಲ್ಲಿ ಮಲಗಿರುವವರು?" ಎಂದು ರಾಣಿಯವರು ಅಲ್ಲಿ ಬಿದ್ದಿದ್ದ ಜವಾನರನ್ನು ತೋರಿಸುತ್ತ ಕೇಳಿದರು. "ನಾನು ಏಕೆ ಹೇಳಲಿ" ಎಂದು ಪಾಪಚ್ಚಿ ಸುಮ್ಮನಿದ್ದಳು. ಆದರೆ, ಒಂದು ವಿಚಿತ್ರ. ಅಲ್ಲಿ ಮಲಗಿದ್ದ ಜವಾನರ ಬೆನ್ನಿಗೂ, ಇತರರೆಲ್ಲರ ಬೆನ್ನಿಗೂ, ಅಂಗಿಯ ಬಣ್ಣದಲ್ಲಾಗಲಿ, ಅಂಚು ಗೆರೆ, ಮುದ್ರೆ ಇವುಗಳಲ್ಲಾಗಲಿ ಯಾವ ವ್ಯತ್ಯಾಸವೂ ಇರಲಿಲ್ಲ. ಎಲ್ಲರ ಬೆನ್ನಿಗೂ ಒಂದೇ ಬಗೆಯ ಬಟ್ಟೆಯ ಅಂಗಿ! ಇಸ್ಪೀಟು ಕಟ್ಟಿನಲ್ಲಿರುವ ಹಾಗೆಯೇ! ಆಳುಗಳು ಹಾಗೆಯೇ ಬಿದ್ದುಕೊಂಡಿದ್ದರೆ ಅವರು ಜವಾನರೋ, ಅರಸಿಯರೋ, ಅತಿಥಿಗಳೋ, ಸಿಪಾಯಿಗಳೋ, ಪುರೋಹಿತರೋ, ಅಧಿಕಾರಿಗಳೋ,—ಯಾವುದೂ ಹೇಳಲಾಗುತ್ತಿರಲಿಲ್ಲ. "ಇವರು ಯಾರು?" ಎಂದು ರಾಣಿ ಪಾಪಚ್ಚಿಯನ್ನೇ ಇನ್ನೊಂದುಸಾರಿ ಕೇಳಿದಳು. "ನನಗೇನು ಗೊತ್ತು?" ಎಂದು ಅವಳು ಉತ್ತರ ಹೇಳಿಬಿಟ್ಟಳು. ರಾಣಿ ಹೆಬ್ಬುಲಿಯ ಹಾಗೆ ರೇಗಿದಳು. "ಕತ್ತರಿಸು ಇವಳ ತಲೆಯನ್ನ!" ಎಂದು ಒಬ್ಬ ಭಟನಿಗೆ ಆಜ್ಞಾಪಿಸಿದಳು. ಆದರೇನು, ಪಾಪಚ್ಚಿ ಕೊಂಚವೂ ಹೆದರಲಿಲ್ಲ. "ಹುಚ್ಚರು! ನಿಮಗೆಲ್ಲಾ ಹುಚ್ಚು!" ಎಂದು ಧೈರ್ಯವಾಗಿ ರಾಣಿಯ ಮುಖಮುರಿಯುವ ಹಾಗೆ ಮಾತನಾಡಿದಳು. ರಾಣಿಗೆ ಬಹಳ ಅವಮಾನ ವಾಯಿತು. ಆದರೆ, ರಾಜನು, ಅವಳ ಕೈಯನ್ನು ಹಿಡಿದೆಳೆದು, "ಪ್ರಿಯೆ! ಬೇಡ. ಬಿಡು. ಪಾಪ! ಏನೂ ತಿಳಿಯದ ಕೂಸು" ಎಂದನು. ಭಟನು ಪಾಪಚ್ಚಿಯನ್ನು ಪ್ರಾಣಸಹಿತ ಬಿಟ್ಟನು.

ಅನಂತರ ರಾಣಿ ಮಂತ್ರಿಯನ್ನು ಬಳಿಗೆ ಕರೆದು "ಅವರನ್ನು ಮಗುಚು!" ಎಂದು ಅಪ್ಪಣೆಮಾಡಿದಳು. ಅವನು ಬಿದ್ದಿದ್ದವರ ಪಕ್ಕಕ್ಕೆ ಮೆಲ್ಲಮೆಲ್ಲನೆ ಹೋಗಿ, ಕಾಲಿನಿಂದ ಒಬ್ಬೊಬ್ಬರನ್ನಾಗಿ ಮಗುಚಿ ಬೆನ್ನ ಮೇಲೆ ಮಲಗಿಸಿದನು. ಅವರು ಕೇವಲ ಜವಾನರೆಂದು ತಿಳಿದ ಕೂಡಲೇ,

"ನಿಂತುಕೊಳ್ಳಿರೋ, ಕತ್ತೆಗಳಾ!" ಎಂದು ಹೇಳಿದನು. ಮೂವರೂ ಎದ್ದು ನಿಂತು, ನಡು ಕಟ್ಟಿ, ಎಲ್ಲರಿಗೂ ಕೈಮುಗಿದರು. ಸ್ವಲ್ಪ ಹೊತ್ತಿನ ತನಕ ಕೈಮುಗಿಯುತ್ತಲೇ ಇದ್ದರು. ರಾಣಿಯವರು, "ಇಲ್ಲಿ ಏನು ಮಾಡುತ್ತಿದ್ದಿರಿ?" ಎಂದು ಅವರನ್ನು ಕೇಳಿದರು. ಆಗ, ಎರಡು ಬಗ್ಗಿ ನಿಂತು, ಬಹಳ ನಮ್ರತೆಯಿಂದ, "ಮಹಾಸ್ವಾಮಿ!....ನಾವು.... ಇಲ್ಲಿ....ಕೊಂಚ...." ಎಂದು ಪ್ರಾರಂಭಿಸಿದನು. "ಓಹೋ! ತಿಳಿಯಿತು. ತಿಳಿಯಿತು. ಇವರ ತಲೆ ಕತ್ತರಿಸಿ" ಎಂದು ಆಜ್ಞೆಮಾಡಿ, ರಾಣಿಯವರೂ ರಾಜನೂ ಮುಂದಕ್ಕೆ ಹೊರಟರು.

ಪಾಪ! ಆ ಜವಾನರನ್ನು ಹಿಡಿದುಕೊಳ್ಳಲು ಮೂವರು ಸಿಪಾಯಿಗಳು ಹಿಂದೆ ನಿಂತರು. ಪ್ರಾಣಭಯದಿಂದ ಅವರು ಹೇಗೋ ತಲೆ ತಪ್ಪಿಸಿಕೊಂಡು ಪಾಪಚ್ಚಿ ನಿಂತಲ್ಲಿಗೆ ಓಡಿಬಂದು, "ಅಮ್ಮಾ! ನಮ್ಮ ಜೀವ ಉಳಿಸಿಕೊಡಿ. ನಿಮ್ಮ ಹೆಸರು ಹೇಳಿಕೊಂಡು ಎಲ್ಲಾದರೂ ಕಾಲ ತಳ್ಳುತ್ತೇವೆ" ಎಂದು ಕಾಲಿಗೆರಗಿದರು. ಪಾಪಚ್ಚಿ ಅವರನ್ನು ಹಿಡಿದೆತ್ತಿ ಹತ್ತಿರದಲ್ಲಿದ್ದ ಒಂದು ಕುಂಡದೊಳಗೆ ಇರಿಸಿದಳು. ಸಿಪಾಯಿಗಳು ಕೊಂಚ ಹೊತ್ತು ಹುಡುಕಿ, ಅವರನ್ನು ಕಾಣದೆ, ನಿರಾಶರಾಗಿ, ಶಪಿಸುತ್ತಾ ಹೊರಟುಹೋದರು. ರಾಣಿಯವರು, "ಆಯಿತೆ?" ಎಂದು ಕೇಳಲು, "ಬಿಟ್ಟೇವೆ?" ಎಂದುತ್ತರಕೊಟ್ಟರು. ರಾಣಿಗೆ ತುಂಬ ಆನಂದವಾಯಿತು. "ತುಂಡು ತುಂಡುಮಾಡಿ ಹೂತುಬಿಟ್ಟಿದೇವೆ!" ಎಂದು ಭಟರು ಹೇಳಿದರು.

ಪಾಪಚ್ಚಿಯೂ ಮೆರವಣಿಗೆಯಲ್ಲಿ ಸೇರಿಕೊಂಡಳು. ಎಂಟು ಹತ್ತು ಮಾರು ಮುಂಡಕ್ಕೆ ಹೋದ ಮೇಲೆ ಅವಳನ್ನು ರಾಣಿಯವರು ಕರಸಿ "ನಿನಗೆ ಚೆಂಡಾಡುವುದಕ್ಕೆ ಬರುತ್ತದೆಯೇ?" ಎಂದು ವಿಚಾರಿಸಿದರು. "ಇತರರು ಆಡುವುದನ್ನು ನೋಡಿ ಅಲ್ಲೇ ಕಲಿತರಾಯ್ತು. ಬರುವುದಿಲ್ಲವೆಂದು ಈಗಲೇ ಹೇಳಿದರೆ ಸೇರಿಸುವುದೇ ಇಲ್ಲ," ಎಂದು ಯೋಚನೆಮಾಡಿ "ಸ್ವಲ್ಪ ಸ್ವಲ್ಪ ಬರುತ್ತೆ" ಎಂದು ಪಾಪಚ್ಚಿ ಹೇಳಿದಳು. "ಹಾಗಾದರೆ, ನೀನೂ ಬಾ" ಎಂದು ರಾಣಿಯವರ ಅಪ್ಪಣೆಯಾಯಿತು.

ಬಿರುಬಿರನೆ ನಡೆದು ಪಾಪಚ್ಚಿ ಅತಿಥಿಗಳ ನಡುವೆ ಇದ್ದ ಮೊಲದ ಸಮೀಪಕ್ಕೆ ಬಂದಳು. "ಚೆನ್ನಾಗಿದ್ದೀರಾ, ತಿಮ್ಮಮ್ಮನವರೇ?" ಎಂದು

ಮೊಲವು ಕುಶಲ ಪ್ರಶ್ನೆಮಾಡಿತು. "ಇನ್ನೂ ನನ್ನನ್ನು ತಿಮ್ಮಿ ಎಂದು ತಿಳಿದುಕೊಂಡಿದೆ, ಮಂಕು" ಎಂದು ಒಳಗೊಳಗೆ ಗೊಣಗುಟ್ಟುತ್ತಾ, "ನೀವು ಹೇಗಿದ್ದೀರಿ! ಅಮ್ಮಾವರು ಎಲ್ಲಿ?" ಎಂದು ಪಾಪಚ್ಚಿ ಕೇಳಿದಳು. ಮೊಲ "ಮೆಲ್ಲಗೆ,—ಮೆಲ್ಲಗೆ ಮಾತನಾಡಿ. ಇಲ್ಲಿ ಎಲ್ಲರಿಗೂ ಮೈಯೆಲ್ಲಾ ಕಿವಿ!" ಎಂದು ಹೇಳುತ್ತಾ, ರಾಣಿಯವರು ಎಷ್ಟು ಹಿಂದೆ ಇರುವರೆಂದು ಹಿಂದಿರುಗಿ ನೋಡಿತು. ಅವರು ಇನ್ನೂ ದೂರದಲ್ಲೇ ಬರುತ್ತಿರುವರೆಂದು ತಿಳಿದು, "ಅಮ್ಮಾವರಿಗೆ ಆಗಲೇ ಮರಣದಂಡನೆಯಾಗಿದೆ. ಈಗ ಬಂದೀ ಖಾನೆಯಲ್ಲಿದ್ದಾರೆ" ಎಂದು ಹೇಳಿತು. "ಏಕೆ?" ಎಂದು ಪಾಪಚ್ಚಿ ಕೇಳಿದಳು. "ಹತ್ತಿರ ಬನ್ನಿ, ಹೇಳುತ್ತೇನೆ. ಯಾರಿಗಾದರೂ ಕೇಳಿಸಿದರೆ ನನ್ನ ತಲೆಯೂ ಹಾರುತ್ತೆ. ಬೆಳಿಗ್ಗೆ ಅಮ್ಮಾವರು ರಾಣಿಯವರ ಕಿವಿಯನ್ನು ಹಿಡಿದು ಬಲವಾಗಿ ಹಿಂಡಿಬಿಟ್ಟರಂತೆ. ಏಕೆಂದರೆ, ಅಮ್ಮಾವರು ಮನೆಯಿಂದ ಬರುವುದು ಕೊಂಚ ತಡವಾಯಿತು. ಅದಕ್ಕೆ ರಾಣಿಯವರು ಕೋಪಿಸಿ ಕೊಂಡು, ತೊಪ್ಪೆ...."

"ಸದ್ದು!....ಸರ್ವರೂ ಕುಳಿತುಕೊಳ್ಳಬೇಕು!" ಎಂದು ಎಲ್ಲ ಭಟರು ಒಟ್ಟಿಗೆ ಕೂಗಿದ್ದರಿಂದ, ಮೊಲದ ಮಾತು ಅಲ್ಲಿಗೇ ನಿಂತು ಹೋಯಿತು. ಎಲ್ಲರೂ ನಿಂತಲ್ಲಿಯೇ ನೆಲ ನೋಡದೆ ಕುಕ್ಕರಿಸಿಬಿಟ್ಟರು. ....ಕೂಡಲೆ ಚೆಂಡಾಟವು ಪ್ರಾರಂಭವಾಯಿತು.

ಆಟದ ಮೈದಾನವು ಸಮವಾಗಿರಲಿಲ್ಲ. ಅದು ಹಿಗ್ಗಾತಗ್ಗಾದ ಒಂದು ಪಾಳು ಬಯಲಾಗಿತ್ತು. ರಾಜನು ಮನಸ್ಸುಮಾಡಿದ್ದರೆ, ಅದಕ್ಕಿಂತ ಸೊಗಸಾದ, ಹಳ್ಳಗಿಳ್ಳಗಳಿಲ್ಲದ, ಮುಳ್ಳು ಪೊದರುಗಳಿಲ್ಲದ ಬಯಲನ್ನು ತಯಾರುಮಾಡಬಹುದಾಗಿತ್ತು. ಆದರೆ, ಅವನಿಗೆ ಅಸಡ್ಡೆ. ತಿಳಿಗೇಡಿತನ.

ಚೆಂಡಾಟದ ರೀತಿಯೂ ಕೂಡ ಕೊಂಚ ವಿಚಿತ್ರವಾಗಿತ್ತು. ಎಲ್ಲರಿಗೂ ಒಂದೊಂದು ಚೆಂಡು, ಒಂದೊಂದು ದಾಂಡು. ಅಲ್ಲಲ್ಲಿ ಇಬ್ಬಿಬ್ಬರು ಸಿಫಾಯಿಗಳು ಎದುರುಬದುರಾಗಿ ನಿಂತು ತಲೆಬಾಗಿಕೊಂಡು ಕಮಾನುಗಳ ಹಾಗೆ ನಿಂತಿದ್ದರು. ಅವರ ನಡುವೆ ಚೆಂಡನ್ನು ಹೊಡೆಯ

ಬೇಕಾಗಿತ್ತು. ಎಷ್ಟು ಸಲ ಹೊಡೆದನೋ, ಅಷ್ಟೊ ಅಷ್ಟು ಗಟ್ಟಿಗ ಅಂತ ಹೆಸರು ಹೊಡೆದವನಿಗೆ. ಮೂತಿಯನ್ನು ಕಾಲು ಸಂದಿಯಲ್ಲಿಟ್ಟು ಕೊಂಡು ನಿದ್ದೆಹೋಗುತ್ತಿದ್ದ ಮುಳ್ಳುಹಂದಿಗಳೇ ಚೆಂಡುಗಳು. ದಾಂಡು ಗಳು ಯಾವುವು ಅಂತ ಕೇಳುತ್ತೀರೋ? ರೆಕ್ಕೆ ಮಡಿಸಿದ ಕೊಕ್ಕರೆಗಳು. ಅಂದರೆ,—ಕೊಕ್ಕರೆಯ ಕಾಲುಗಳನ್ನು ಮಡಿಸಿ ಹೊಟ್ಟೆಯ ಭಾಗವನ್ನು ಕಂಕುಳಲ್ಲಿ ಬಲವಾಗಿ ಅದುಮಿ ಹಿಡಿದುಕೊಂಡು ಅದರ ಕೊಕ್ಕಿನಿಂದ ಮುಳ್ಳುಹಂದಿಯನ್ನು ಹೊಡೆದು ಸಿಪಾಯಿಗಳ ಮಧ್ಯೆ ತೂರಿಸಬೇಕು.— ಇದೇ ಆಟ.

ಪಾಪಚ್ಚಿಗೆ ತಮ್ಮ ಪಾಠಶಾಲೆಯ ಚೆಂಡಾಟವೇ ಎಷ್ಟೋ ಮೇಲೆಂದೆನಿಸಿತು. ಏಕೆಂದರೆ, (೧) ಇಲ್ಲಿ ಕೊಕ್ಕರೆಯನ್ನು ಮಡಿಸಿ ಹಿಡಿದು ಕೊಳ್ಳುವುದೇ ಕಷ್ಟ. ಹೊಡೆಯುವತನಕ ಸುಮ್ಮನಿದ್ದು, ಸಮಯಕ್ಕೆ ಸರಿಯಾಗಿ ಕತ್ತನ್ನು ಮೇಲಕ್ಕೆ ಎತ್ತಿಹಿಡಿದುಬಿಡುತ್ತದೆ. ಏನು ಮಾಡಿದರೂ ತಲೆಯನ್ನು ಇಳಿಯಬಿಡುವುದಿಲ್ಲ. (೨) ಒಂದು ವೇಳೆ ಕೊಕ್ಕರೆ ಸುಮ್ಮ ನಿದ್ದರೂ, ಅದುವರೆಗೂ ಗುಂಡಗಿದ್ದ ಮುಳ್ಳುಹಂದಿ ನಿದ್ದೆಯಿಂದೆದ್ದು ಮಣ್ಣನ್ನು ಬಗಿದುಕೊಂಡು ನೆಲದೊಳಕ್ಕೆ ಹೊರಟುಹೋಗುತ್ತದೆ. (೩) ಕೆಲವು ವೇಳೆ ಹಂದಿಯನ್ನು ಸರಿಯಾಗಿ ಹೊಡೆದರೂ, ಅದು ಒಂದೇ ಸಮವಾಗಿ ಉರುಳದೆ, ಹಳ್ಳದಲ್ಲಿ ಬಿದ್ದುಬಿಡುತ್ತದೆ; ದಿಣ್ಣೆ ಹತ್ತುವುದಿಲ್ಲ. (೪) ಒಂದೆರಡು ಸಾರಿ ಹೊಡೆತದ ಜೋರಿನಿಂದ ಹಳ್ಳಗಳನ್ನು ಹಾರಿ ಹೋದರೂ ಕೂಡ, ಅದುವರೆಗೂ ಸರಿಯಾಗಿ ಬಗ್ಗಿನಿಂತಿದ್ದ ಜವಾನರಿಗೆ ಕತ್ತುನೋವೋ, ಬಾಯಾರಿಕೆಯೋ, ಬೀಡಿಯ ಜ್ಞಾಪಕವೋ ಬಂದು ಅವರು ಹೊರಟುಹೋಗಿಬಿಡುವರು. ಹೀಗೆ ಕಡಲೆಯಿದ್ದಾಗ ಹಲ್ಲಿಲ್ಲ, ಹಲ್ಲಿದ್ದಾಗ ಕಡಲೆಯಿಲ್ಲ—ಎಂಬಹಾಗೆ, ಎಲ್ಲವೂ ಒಂದೇ ಕಾಲದಲ್ಲಿ ಕೂಡಿ ಬರುತ್ತಿರಲಿಲ್ಲ.

ಇದು ಸಾಲದೆ, ಆಟಗಾರರಲ್ಲೇ ಜಗಳ, ಮನಸ್ತಾಪ, ಅಂತಃಕಲಹ, ವಾಗ್ಯುದ್ಧ, ಹೊಡೆದಾಟ! ಯಾಕೆಂದರೆ, ಆಟಗಾರರನ್ನು ಹತೋಟಿ ಯಲ್ಲಿಟ್ಟಿರಲು ಒಂದು ಕಾನೂನಿಲ್ಲ, ಕರಾರಿಲ್ಲ, ಹೇಳುವವರಿಲ್ಲ, ಕೇಳು ವವರು ಮೊದಲೇ ಇಲ್ಲ. ಯಾರು ಮುಂದೆ, ಯಾರು ಹಿಂದೆ? ಗೆದ್ದವರು

ಯಾರು, ಸೋತವರು ಯಾರು? ಆಟದ ನಿಯಮಗಳೇನು?—ಯಾವುದೂ ಯಾರಿಗೂ ಗೊತ್ತಿರಲಿಲ್ಲ. "ನನ್ನ ಹಂದಿಯನ್ನು ನೀನು ಏಕೆ ಹೊಡೆದೆ?" "ನನ್ನ ಕೊಕ್ಕರೆಯ ಮೂಗು ನಿನ್ನಿಂದ ಡೊಂಕಾಯಿತು," ಈ ಮೊದಲಾದ ಕೂಗು ಎಲ್ಲೆಲ್ಲಿಯೂ ಕೇಳಿಸುತ್ತಿತ್ತು. ಇದೆಲ್ಲವನ್ನೂ ಮೀರಿಸಿ, ಮಾರಿಯ ಹಾಗೆ ರಾಣಿಯ ರೇಗಾಟ!—"ಅವನ ತಲೆ ಕತ್ತರಿಸು! ಇವಳನ್ನು ಗಲ್ಲಿಗೆ ಹಾಕು! ಅವನನ್ನು ಶೂಲಕ್ಕೆ ಏರಿಸು!" ಕ್ಷಣ ಕ್ಷಣಕ್ಕೂ ಇದೇ ಆರ್ಭಟ.

ಪಾಪಚ್ಚಿಗೆ, ಯಾವಾಗ ತನ್ನ ತಲೆಗೆ ಬರುವುದೋ, ಎಂಬ ಭಯ. ಹಿಂದೊಂದು ಸಲ ತಾನು ತಿರುಗಿಬಿದ್ದಾಗ ರಾಜನು ಕಾಪಾಡಿದನು. ಆದರೆ, ಮತ್ತೊಮ್ಮೆ ತಲೆತಪ್ಪಿಸಿಕೊಳ್ಳಲು ಸಾಧ್ಯವೇ? ಅಂತು, ತಾನು ಬಹಳ ಎಚ್ಚರಿಕೆಯಿಂದಿರಬೇಕೆಂದು ಪಾಪಚ್ಚಿಗೆ ತಿಳಿಯಿತು. "ಇಲ್ಲಿ ಏನು! ಪ್ರಾಣ ತೆಗೆಯುವುದು ಅಂದರೆ ಪಾಯಸ ಕುಡಿದ ಹಾಗೆ. ತರಗೆಲೆಗಳ ಹಾಗೆ ಉದುರುತ್ತಿವೆ ತಲೆಗಳು. ಆದರೂ ಇಷ್ಟೊಂದು ಜನ ಮಿಕ್ಕಿದಾರಲ್ಲಾ! ಅದೇ ಆಶ್ಚರ್ಯ" ಎಂದು ಯೋಚಿಸಿದಳು. ಬುದ್ಧಿವಂತೆ, ಹುಡುಗಿ!

---

## ಅಮ್ಮಾವರ ಬೆಕ್ಕು

ಆಗ, ಅವಳ ನೆತ್ತಿಗೆ ನೇರವಾಗಿ ಆಕಾಶದಲ್ಲಿ ಮಸಕು ಮಸಕಾಗಿ ಒಂದು ಪ್ರಕಾಶವಾದ ಹಾಗಾಯಿತು. ಕ್ರಮ ಕ್ರಮವಾಗಿ ಅದು ಹೆಚ್ಚಾಯಿತು; ಸ್ಪಷ್ಟವಾಯಿತು; ಕಣ್ಣಿಗೆ ಗೋಚರವಾಯಿತು. ಪಾಪಚ್ಚಿಗೆ ಅದು ಏನೆಂದು ಕೊನೆಗೆ ಗೊತ್ತಾಯಿತು. "ಓ! ಬಾಬಾಬುಡನ್ ಬೆಕ್ಕಿನ ಹಲ್ಲುಕಿರಿತ!....ಪರವಾಗಿಲ್ಲ. ಇಲ್ಲಿ ನನಗೊಂದು ಸ್ನೇಹಿತ ಸಿಕ್ಕಿದ ಹಾಗಾಯಿತು. ಇಲ್ಲಿಂದ ಹೇಗಾದರೂ ತಪ್ಪಿಸಿಕೊಂಡು ಹೋಗಲು ಇದಕ್ಕೆ ಉಪಾಯ ಗೊತ್ತಿದ್ದರೂ ಇರಬಹುದು" ಎಂದು ಯೋಚಿಸಿ, ಅವಳು ಮತ್ತೆ ನಗುಮೊಗದವಳಾದಳು. ಆ ಕಿರಿತದ ಹಿಂದೆ, ಮಾತು ಹೊರಡುವುದಕ್ಕೆ ಸಾಕಾಗುವಷ್ಟು ಬಾಯಿ ಕಾಣಿಸಿಕೊಂಡ ತಕ್ಷಣವೇ

"ಏನು ಮಾಡುತ್ತಿದ್ದೀರಿ?" ಎಂದು ಬೆಕ್ಕು ಕೇಳಿತು. "ಈಗಲೇ ನಾನು ಉತ್ತರ ಹೇಳಿ ಏನು ಪ್ರಯೋಜನ? ಒಂದು ಕಿವಿಯಾದರೂ ಪ್ರತ್ಯಕ್ಷ ವಾಗಲಿ. ಇಲ್ಲದಿದ್ದರೆ, ಬೆಕ್ಕಿಗೆ ಕೇಳಿಸುವುದು ಹೇಗೆ?" ಎಂದು ಪಾಪಚ್ಚಿ ಕೊಂಚ ಹೊತ್ತು ಕಾದಿದ್ದಳು. ಎರಡು ಮೂರು ನಿಮಿಷಗಳಲ್ಲಿಯೇ ಬೆಕ್ಕಿನ ತಲೆಬುರುಡೆ ಎಲ್ಲವೂ ಸಿದ್ಧವಾಯಿತು. ಪಾಪಚ್ಚಿ ತನ್ನ ಕೊಕ್ಕರೆಯನ್ನು ಕೆಳಗಿಳಿಸಿ ಚೆಂಡಾಟದ ತೊಂದರೆಗಳನ್ನೂ ಆಟಗಾರರ ಅನ್ಯಾಯಗಳನ್ನೂ ಬೆಕ್ಕಿಗೆ ವಿವರಿಸಿದಳು. ಬೆಕ್ಕಿನ ಉಳಿದ ಭಾಗಗಳು ಬರಲೇ ಇಲ್ಲ. ಅವು ಅದಕ್ಕೆ ಆಗ ಇರಬೇಕಾದ ಅಗತ್ಯವೂ ಇರಲಿಲ್ಲ, ಅನ್ನಿ. ಮಾತಾಡಬೇಕು. ಮಾತು ಕೇಳಿಸಬೇಕು. ಅಷ್ಟೇ. ಅದಕ್ಕೆ ಬಾಯಿ, ಕಿವಿ ಎರಡು ಸಾಕುತಾನೆ! "ನೋಡಿ! ಇಲ್ಲಿ ಯಾರೂ ಸರಿಯಾಗಿ, ಸತ್ಯವಾಗಿ ಆಟವಾಡುವುದೇ ಇಲ್ಲ. ಇವರ ಗಲಾಟೆಯಲ್ಲಿ ಒಬ್ಬರ ಮಾತು ಇನ್ನೊಬ್ಬರಿಗೆ ಕೇಳಿಸುವುದಿಲ್ಲ. ನಾನು ಹೇಳುವುದೇನೆಂದು ನನಗೇ ಕೇಳಿಸುವುದಿಲ್ಲ....ಇತರರು ಯಾರನ್ನಾದರೂ ಕೇಳಿ ತಿಳಿದುಕೊಳ್ಳಬೇಕಾಗಿದೆ! ಆಟದ ಸಾಮಾನುಗಳಿ ಗೆಲ್ಲಾ ಜೀವ ಇರುವುದರಿಂದ ಒಂದೂ ಕೈಗೆ ಸಿಕ್ಕುವುದಿಲ್ಲ. ನೋಡಿ! ಈಗತಾನೆ ನಾನು ರಾಣಿಯವರ ಚೆಂಡನ್ನು ಹೊಡೆಯುವುದರಲ್ಲಿದ್ದೆ. ಅದು ನನ್ನ ಹತ್ತಿರಕ್ಕೆ ಓಡಿಬಂದುಬಿಟ್ಟಿದೆ. ನನ್ನ ಕಮಾನಿನ ಸಿಪಾಯಿಗಳಿಬ್ಬರೂ, ಅಗೋ, ಅಲ್ಲಿ ಹೊಡೆದಾಡುತ್ತಿದಾರೆ" ಎಂದು ತನ್ನ ಗೋಳನ್ನು ಹೇಳಿ ಕೊಂಡಳು.

"ರಾಣಿ ಹೇಗಿದಾಳೆ?" ಎಂದು ಬೆಕ್ಕಿನ ಬಾಯಿ ಕೇಳಿತು. "ಅವಳು ರಾಕ್ಷಸಿ....(ಇಷ್ಟರಲ್ಲಿ ರಾಣಿಯವರೇ ತನ್ನ ಮುಳ್ಳುಹಂದಿಯನ್ನು ಹುಡುಕುತ್ತಾ ಅಲ್ಲಿಗೆ ಬಂದುಬಿಟ್ಟಿದ್ದರು. ಆದ್ದರಿಂದ) ರಾಕ್ಷಸಿಗಳ ಮಧ್ಯೆ ಇದ್ದ ಸೀತಾದೇವಿಯ ಹಾಗಿದಾರೆ" ಎಂದು ಪಾಪಚ್ಚಿ ಗಟ್ಟಿಯಾಗಿ ಹೇಳಿದಳು. ಈ ಉಪಾಯದಿಂದ ರಾಣಿಗೆ ಅವಳ ಮೇಲಿನ ಪ್ರೀತಿ ಇಮ್ಮಡಿ ಯಾಯಿತು.

ಆದರೆ, ಬಾಬಾಬುಡನ್ ಬೆಕ್ಕಿನ ಹಲ್ಲುಕಿರಿತ ರಾಣಿಗೆ ಸ್ವಲ್ಪವೂ ಸರಿ ಬೀಳಲಿಲ್ಲ. ಅವಳನ್ನು ಹಿಂಬಾಲಿಸಿ ಅಲ್ಲಿಗೆ ಬಂದ ರಾಜನಿಗೂ ಅದು ತೀರ ಅಸಹ್ಯವಾಗಿ ಕಾಣಿಸಿತು. "ಪ್ರಿಯೆ! ಈ ಅನಿಷ್ಟವನ್ನು, ಈ ಅಪಶಕುನ

ವನ್ನು, ಬೇಗನೆ ಇಲ್ಲಿಂದ ತೊಲಗಿಸು" ಎಂದು ರಾಜನು ಬೇಡಿದನು. ರಾಣಿಗೆ ತಿಳಿದಿದ್ದುದು ಒಂದೇ ಮಂತ್ರ,—"ಅದರ ತಲೆ ಕತ್ತರಿಸು!" ಸರಿ! ಅಪ್ಪಣೆಯಾಯಿತು! ಸುಗ್ರೀವಾಜ್ಞೆ. "ಆಗಲಿ! ನಾನೇ ಹೋಗಿ ಕಟುಕನನ್ನು ಕಳುಹಿಸುತ್ತೇನೆ" ಎಂದು ಹೇಳಿ ರಾಜನು ಹೊರಟನು. ಒಂದೆರಡು ನಿಮಿಷಗಳಲ್ಲಿಯೇ, ಹರಿತವಾದ ಒಂದು ದೊಡ್ಡ ಕೊಡಲಿ ಸಹಿತ ವಾಗಿ ಆಸ್ಥಾನದ ಕಟುಕನು ಬಂದನು. ಎಲ್ಲರೂ ಬೆಕ್ಕಿನ ಸುತ್ತ ಸಭೆ ಸೇರಿದರು. ರಾಣಿಯವರು "ಕತ್ತರಿಸು ಇದರ ತಲೆಯನ್ನ!" ಎಂದು ಗರ್ಜಿಸಿದರು. ಆದರೆ, ಕಟುಕನು ಅದಕ್ಕೆ ಒಪ್ಪಲಿಲ್ಲ. "ಮಹಾಸ್ವಾಮಿ, ಬಡವನ ಮೇಲೆ ಕೋಪಿಸಬಾರದು. ಕತ್ತೇ ಇಲ್ಲದ ಪ್ರಾಣಿಯ ತಲೆಯನ್ನು ನಾನು ಹೇಗೆ ಕತ್ತರಿಸಲಿ? ಮಹಾಸ್ವಾಮಿ! ನನಗೆ ತಿಳಿಯದು" ಎಂದು ಹೇಳಿ ಕೊಡಲಿಯನ್ನು ನೆಲದಮೇಲಿರಿಸಿ ಅಡ್ಡಬಿದ್ದನು. ತಲೆ ತೆಗೆಯುವುದಕ್ಕೆ ತಲೆ ಎಂಬ ಪದಾರ್ಥ ಒಂದೇ ಇದ್ದರೆ ಸಾಕು ಎಂದು ಮುಂತಾಗಿ ರಾಜನು ಬಹಳವಾಗಿ ಕಟುಕನೊಂದಿಗೆ ವಾದಿಸಿದನು. ತನ್ನ ಕೋರಿಕೆಯನ್ನು ನೆರವೇರಿಸದಿದ್ದರೆ ಕಟುಕನ ತಲೆಯನ್ನೂ ಕಡಿದುಬಿಡುವೆನೆಂದು ರಾಣಿಯು ಕೂಗಿ ರೇಗಿದಳು. ಆದರೇನು, ಅವನು ಏಳಲೇ ಇಲ್ಲ.

ಪಾಪಚ್ಚಿಗೆ ಇದೆಲ್ಲವನ್ನೂ ನೋಡಿ ನಗು ಬಂತು. ಅವಳು ರಾಣಿಯ ಬಳಿಗೆ ಸರಿದು, "ಆ ಬೆಕ್ಕು ಅಮ್ಮಾವರದು. ಅದರ ತಲೆ ಕಡಿಯಬೇಕಾದರೆ ಮೊದಲು ಅಮ್ಮಾವರ ಅನುಮತಿಯನ್ನು ಪಡೆಯಬೇಕಲ್ಲವೆ?" ಎಂದು ಸೂಚನೆಕೊಟ್ಟಳು. "ಲೋ, ಒಂಬತ್ತು! ಬೆಟ್ಟದ ಮೇಲಿನ ಸೆರೆಮನೆಯಲ್ಲಿ ಅಮ್ಮಾವರಿದ್ದಾರೆ, ಇಲ್ಲಿಗೆ ಸರಸರನೆ ಎಳೆದುಕೊಂಡು ಬಾ!" ಎಂದು ಹೇಳಿ ಆ ಆಳಿನ ಕೈಗೆ ರಾಣಿ ಒಂದು ದೊಡ್ಡ ಬೀಗದ ಕೈಯನ್ನು ಕೊಟ್ಟಳು. ಬಿಟ್ಟ ಬಾಣದ ಹಾಗೆ ಅವನು ಓಡಿದನು.

ಅಷ್ಟರಲ್ಲಿ, ಯಾರಿಗೂ ತಿಳಿಯದೆಯೇ, ಬಾಬಾಬುಡನ್ ಬೆಕ್ಕಿನ ತಲೆ ಬುರುಡೆಯು, ಅಳಿಸಿಹೋಗುತ್ತಾ ಬಂತು. ಅಮ್ಮಾವರು ಅಲ್ಲಿಗೆ ಬರು ವುದರೊಳಗೆ ಅದು ಸಂಪೂರ್ಣ ಮಾಯವಾಗಿಬಿಟ್ಟಿತ್ತು. ಸಿಪಾಯಿ ಗಳೆಲ್ಲರೂ ಬೆಕ್ಕನ್ನು ಹಿಡಿಯಲು ಹುಡುಕಾಡಿದರು. ಆದರೆ, ಅದರ ಕಿರಿತದ ಬೆಳಕೂ ಕೂಡ ಅವರಿಗೆ ಸಿಗಲಿಲ್ಲ. ಎಲ್ಲರೂ ಚೆಲ್ಲಾಪಿಲ್ಲಿಯಾಗಿ ಬೆಕ್ಕನ್ನು

ಹಿಡಿದು ಬಂಧಿಸಲು ನಾಲ್ಕು ಕಡೆಗಳಿಗೂ ಹೋದದ್ದರಿಂದ ಆ ಮರದಡಿಯಲ್ಲಿ ಪಾಪಚ್ಚಿ, ಅಮ್ಮಾವರು, ಇಬ್ಬರು ಮಾತ್ರ ಉಳಿದರು.

ಅಮ್ಮಾವರು ನಿಷ್ಕರುಣಿ, ಮಕ್ಕಳ ಮೇಲೆ ಕನಿಕರವಿಲ್ಲದವರು ಎಂದು ಪಾಪಚ್ಚಿ ಆಗಲೇ ಅರಿತಿದ್ದಳು. ಆದರೆ, ಇಂದು ಅವರು ಬಹಳ ವಿನಯದಿಂದ, ಪ್ರೀತಿ ತುಂಬಿದ ಮಾತುಗಳನ್ನಾಡಿದರು. "ಬಾ, ಅಮ್ಮ, ನನ್ನ ಹತ್ತಿರ ಬಾ, ನಿನ್ನನ್ನು ನೋಡುತ್ತಾ ಇದ್ದರೆ ನನ್ನ ಕಣ್ಣು ತಣ್ಣಗಾಗುತ್ತೆ" ಎಂದು ಹೇಳಿದರು. ಬಹುಶಃ, ಅಂದಿನ ಮೂರ್ಖತನಕ್ಕೆ ಮೆಣಸಿನಪುಡಿಯೂ, ಹಂದಿ ಮರಿಯ ತುಂಟತನವೂ ಕಾರಣಗಳಾಗಿದ್ದಿರಬೇಕೆಂದು ಪಾಪಚ್ಚಿ ಊಹಿಸಿದಳು. ಆದ್ದರಿಂದ ಸೆರೆಮನೆಯನ್ನು ಕುರಿತಾಗಲಿ, ರಾಣಿಯವರ ಕೋಪವನ್ನು ಕುರಿತಾಗಲಿ ಪಾಪಚ್ಚಿ ಒಂದು ಮಾತೂ ಆಡಲಿಲ್ಲ.

ಪಾಪಚ್ಚಿ.—"ಚೆಂಡಾಟ ಬಹಳ ಚೆನ್ನಾಗಿತ್ತು."

ಅಮ್ಮಾವರು.—"ಹೌದಮ್ಮಾ. ಚೆನ್ನಾಗಿರುವುದಿಲ್ಲವೆ. ನಿಮಗೆಲ್ಲಾ ಈಗ ಆಡುವ ಪ್ರಾಯ; ಉತ್ಸಾಹ. ಅದಕ್ಕೇ ಶಾಸ್ತ್ರದಲ್ಲಿ ಹೇಳಿರುವುದು, 'ಆಟ, ಊಟ, ಓಟ' ಎಂದು."

"ಓ! ಅದು ನನ್ನ ಪುಸ್ತಕದಲ್ಲೂ ಇದೆ."

"ಇರಬಹುದಮ್ಮಾ, ಇರಬಹುದು. ಇಲ್ಲವೆಂದವರಾರು? ಅದಕ್ಕೇ, ದೊಡ್ಡವರು ಗಾದೆ ಹೇಳುವುದು, 'ಹೆಗಲು ಕಳ್ಳ ಅಂದರೆ ಕುಂಬಳಕಾಯಿ ಮುಟ್ಟಿ ನೋಡಿದ,' ಅಂತ."

"ಆ ಗಾದೆ ಹಾಗಲ್ಲ. ನಾನು ಕೇಳಿರುವುದು ಇನ್ನೊಂದು ತರಹ '....ಕುಂಬಳಕಾಯಿ....' "

"ಇನ್ನೊಂದು ತರಹ ಇರಬಹುದಮ್ಮಾ, ಇರಬಹುದು. ಇಲ್ಲ ವೆಂದವರು ಯಾರು? ಕುಂಬಳಕಾಯಿಯಲ್ಲಿ ಅನೇಕ ತರಹ ಇವೆ. ಬೂದಿ, ಸಕ್ಕರೆ,....ಅದಕ್ಕೇ ದೊಡ್ಡವರು ಹೇಳುವುದು, 'ನಾರಿನಿಂದ ಹೂವೂ ಜಡೆಗೇರಿತು,' ಅಂತ."

"ಅದು ಹೇಗೆ? ನಾರಿನಿಂದ ಹೂವೋ, ಹೂವಿನಿಂದ ನಾರೋ? ಯಾವುದರಿಂದ ಯಾವುದು ಜಡೆಗೇರುತ್ತದೆ?"

"ಚೆನ್ನಾಯಿತು. ಇದೇಕವ್ಮಾ ಹೀಗೆ ಹೇಳುವೆ? ನಿನಗೆ ಏನೂ ತಿಳಿಯದು. ನಾರಿಲ್ಲದೆ....ಅಯ್ಯೋ! ನಾನು ಸತ್ತೆ!!"

ಹೀಗೆಂದು ಕಿರಿಚಿಕೊಂಡು ಅಮ್ಮಾವರು ನೆಲದ ಮೇಲೆ ಬಿದ್ದು ನಮಸ್ಕಾರಮಾಡಿದರು. ಏಕೆಂದರೆ, ಮಹಾರಾಣಿಯವರ ರುದ್ರಾವತಾರ ಆಗಲೇ ಬಂದು ನಿಂತಿತ್ತು. ಅಮ್ಮಾವರ ಸಾಷ್ಟಾಂಗವನ್ನೂ ರಾಜಭಕ್ತಿಯಿಂದ ತುಂಬಿದ ಸ್ತೋತ್ರಗಳನ್ನೂ ಲೆಕ್ಕಿಸದೆ, ರಾಣಿ, "ತೊಲಗು, ತೊಲಗು ಇಲ್ಲಿಂದ, ಓಡು, ಇಲ್ಲದೆ ಇದ್ದರೆ ನಿನ್ನ ತಲೆಬುರುಡೆ ಉರುಳಿಸಿಬಿಡುತ್ತೇನೆ!" ಎಂದು ಬೈದಳು. "ತೊಲಗುತ್ತೀಯೋ ಇಲ್ಲವೋ?" ಎಂದು ಅಟ್ಟಹಾಸ ಮಾಡಿದಳು. ಪಾಪ! ಅಮ್ಮಾವರು ಎದ್ದು ಓಡಿದರು....ಪ್ರಾಣಕ್ಕೆ ಅಪಾಯಬರುವುದಾದರೆ ಮನುಷ್ಯ ಎಷ್ಟು ವೇಗವಾಗಿ ಓಡಬಲ್ಲನೆಂಬುದು ಆಗ ಪಾಪಚ್ಚಿಗೆ ಚೆನ್ನಾಗಿ ತಿಳಿಯಿತು.

---

## ಆಸ್ಥಾನದ ಆಮೆ

"ಬಾರಮ್ಮಾ, ಚೆಂಡಾಡೋಣ" ಎಂದು ಹೇಳಿ ಪಾಪಚ್ಚಿಯನ್ನು ಕರೆದುಕೊಂಡು ರಾಣಿ ಮತ್ತೆ ಆಟದ ಬಯಲಿನ ಕಡೆ ತಿರುಗಿದಳು. ಗುಜುಗುಜಿಸುತ್ತಿದ್ದ ಜನಗಳೆಲ್ಲರೂ ಸುಮ್ಮನಾದರು. ಎದ್ದು ನಿಂತರು. ಪುನಃ ಆಟ ಪ್ರಾರಂಭವಾಯಿತು. ಆರ್ಭಟಕ್ಕೆ ಮೊದಲಾಯಿತು. ರಾಣಿಯ ಕೋಪಕ್ಕೆ ಗುರಿಯಾದವರನ್ನು ಬಂಧಿಸುವುದಕ್ಕೂ ಕಮಾನುಗಳಿಗೂ ಸಿಪಾಯಿಗಳ ಸಂಖ್ಯೆ ಸಾಲದೆ ಹೋಯಿತು. ಆದ್ದರಿಂದ, ಆಟವನ್ನು ಮುಗಿಸಲೇಬೇಕಾಯಿತು!

ಇಷ್ಟರೊಳಗೆ ರಾಣಿಗೆ ಪಾಪಚ್ಚಿಯ ಮೇಲೆ ತುಂಬಾ ಪ್ರೀತಿ ಬೆಳೆದುಬಿಟ್ಟಿತ್ತು. ಅವಳನ್ನು ಕಂಡರೆ ಎಲ್ಲರಿಗೂ ಹಾಗೆಯೇ, ಅನ್ನಿ. ಮುದ್ದಾದ ಮಾತು. ಜಾಣೆ. ಧೈರ್ಯವಾಗಿ ಎಲ್ಲಿಗೆ ಬೇಕಾದರೂ ಹೋಗಿಬರುವಳು, ಯಾರೊಡನೆ ಬೇಕಾದರೂ ಮಾತನಾಡುವಳು. ರಾಣಿ ತನ್ನ ಅಮೃತ ಹಸ್ತವನ್ನು ಅವಳ ಭುಜದ ಮೇಲಿರಿಸಿ "ನೀನಿನ್ನೂ ನಮ್ಮ ಆಸ್ಥಾನದ

ಆಮೆಯನ್ನು ನೋಡಿಲ್ಲವೋ?" ಎಂದು ಕೇಳಿದಳು. "ಇಲ್ಲ. ಹಾಗೊಬ್ಬ ಮಹಾತ್ಮ ಇದಾನೆಂದೇ ನನಗೆ ಇದುವರೆಗೂ ತಿಳಿಯದು" ಎಂದು ಪಾಪಚ್ಚಿ ಉತ್ತರಕೊಟ್ಟಳು. "ಹಾಗಾದರೆ ಬಾರಮ್ಮಾ, ಅದರ ಸ್ವಾರಸ್ಯವಾದ ಕಥೆಯನ್ನು ಅದರ ಬಾಯಿಂದಲೇ ಕೇಳುವೆಯಂತೆ" ಎಂದು ಹೇಳಿ, ರಾಣಿ ಉದ್ಯಾನದಿಂದ ಹೊರಗೆ ಬಂದು, ಒಂದು ವಿಶಾಲವಾದ ಕೆರೆಯ ಕಡೆಗೆ ಪ್ರಯಾಣ ಬೆಳಸಿದಳು. ಅರಮನೆ ಅತಿಥಿಗಳನ್ನೂ ಗಂಡನನ್ನೂ ಬಿಟ್ಟು ರಾಣಿ ತನಗೋಸ್ಕರ ಇಷ್ಟು ಶ್ರಮವಹಿಸಿದ್ದರಲ್ಲಿ ಪಾಪಚ್ಚಿಗೆ ಕೊಂಚ ಹೆಮ್ಮೆ, ತುಂಬಾ ಸಂತೋಷ!

ರಾಣಿ ಸ್ವಲ್ಪ ದೂರ ಹೋದನಂತರ ರಾಜನು ಬಂದಿಗಳೆಲ್ಲರನ್ನೂ ಸಾಲಾಗಿ ನಿಲ್ಲಿಸಿ "ನಿಮಗೆ ಬಿಡುಗಡೆಯಾಗಿದೆ. ಹೋಗಿ. ಅವಳು ಬರುವುದರೊಳಗೆ ಎಲ್ಲಾದರೂ ಮರೆಯಾಗಿ!" ಎಂದು ಹೇಳಿ ಕಳುಹಿಸಿದನು. ಈ ಮಾತು ರಾಣಿಗೆ ಕೇಳಿಸಲಿಲ್ಲ; ಪಾಪಚ್ಚಿಗೆ ಕೇಳಿಸಿತು. ರಾಣಿಯ ಕ್ರೂರಸ್ವಭಾವಕ್ಕೆ ಎದುರಾಗಿ ಇಂಥಾ ದಯಾಶೀಲನಾದ ರಾಜನಿಲ್ಲದಿದ್ದರೆ ಜನರ ಪಾಡು ಏನಾಗಬೇಕು ಎಂದು ಯೋಚಿಸುತ್ತಾ ಪಾಪಚ್ಚಿ ಮುಂದೆ ನಡೆದಳು.

ಹತ್ತಿಪ್ಪತ್ತು ಹೆಜ್ಜೆ ಹೋದನಂತರ ರಾಣಿಯ ಚಿತ್ತ ಬದಲಾಯಿಸಿತು. ಅಲ್ಲಿ ಬಾಯಿ ತೆರೆದು ಬಿಸಿಲು ಕಾಯಿಸುತ್ತಿದ್ದ ಒಂದು ಮೊಸಳೆಯನ್ನು ಕರೆದು, "ಲೋ, ಸೋಮಾರಿ! ಏಳು! ಚಿಕ್ಕಮ್ಮಾವರನ್ನು ಕರೆದುಕೊಂಡು ಹೋಗಿ ಆಮೆ ಹತ್ತಿರ ಬಿಡು. ದಾರಿಯಲ್ಲಿ ಬಾಯಿ ತೆಗೆಯಬೇಡ. ಜೋಕೆ. ಹೋಗಿ, ಆಮೆಯ ಕಥೆಯನ್ನು ಇವರಿಗೆ ಹೇಳಿಸು" ಎಂದು ಆಜ್ಞೆಮಾಡಿದಳು. "ನೀನು ಹೊರಡಮ್ಮಾ! ನಾನು ಈಗಲೇ ಹೋಗಿ ಕೆಲವರ ತಲೆ ಕತ್ತರಿಸಬೇಕಾಗಿದೆ" ಎಂದು ಹೇಳಿ ರಾಣಿ ಅವಸರವಸರವಾಗಿ ಹಿಂದಕ್ಕೆ ನಡೆದಳು.

ಪಾಪಚ್ಚಿಗೆ, ಪಾಪ, ಒಳ್ಳೆಯ ಸಹವಾಸ ದೊರಕಿದಹಾಗಾಯಿತು! ಆದರೂ ಅವಳು ಹೆದರಲಿಲ್ಲ. ಮೆಲ್ಲಗೆ ಮೊಸಳೆಯನ್ನು "ನಿಮಗೆ ಹಸಿವಾಗುತ್ತಿದೆಯೋ?" ಎಂದು ಕೇಳಿದಳು. "ಇಲ್ಲ" ಎಂದು ಮೊಸಳೆ

ಹೇಳಿತು. ಆಗ, ಅವಳಿಗೆ ಕೊಂಚ ಧೈರ್ಯವಾಯಿತು. ಹಸಿವಿಲ್ಲದಿದ್ದರೆ ಯಾವ ಪ್ರಾಣಿಯೂ (ಮನುಷ್ಯ ಹೊರತು) ಆಹಾರ ತೆಗೆದುಕೊಳ್ಳುವುದಿಲ್ಲ ಎಂದು ಅವಳಿಗೆ ಗೊತ್ತಿತ್ತು. ಆದ್ದರಿಂದ, ಮೊಸಳೆ ತನ್ನನ್ನು ತಿನ್ನುವುದಿಲ್ಲ ವೆಂದು ಅವಳು ಊಹಿಸಿದಳು. ಆ ಮೊಸಳೆಯು ಕೂಡ ಇತರ ಮೊಸಳೆಗಳ ಹಾಗಿರಲಿಲ್ಲ. ಯಾವಾಗಲೂ ನಗುತ್ತಲೇ ಇತ್ತು. "ಇದೇನು ಹುಚ್ಚು ಈ ರಾಣಿಗೆ! ಒಬ್ಬರನ್ನೂ ಸಾಯಿಸುವುದಿಲ್ಲ. ಒಬ್ಬರನ್ನಾದರೂ ಹಿಂಸಿಸುವು ದಿಲ್ಲ. ಎಲ್ಲರೂ ನೆಮ್ಮದಿಯಾಗಿದ್ದಾರೆ. ಈ ಹುಚ್ಚಿ ಮಾತ್ರ ದಿನ ಬೆಳಗಾದರೆ, 'ಕಡಿ, ಕತ್ತರಿಸು, ಸಾಯಿಸು, ಇರಿ, ಹೊಡಿ,' ಎಂದು ಕೂಗುತ್ತದೆ! ಅಷ್ಟರಲ್ಲೇ ತೃಪ್ತಿ! ಅಯ್ಯೋ, ಮಂಕೇ!" ಎಂದು ಹೇಳುತ್ತಾ ಮೊಸ ಳೆಯು ಬಹಳ ಹೊತ್ತು ನಕ್ಕಿತು. ಕಡೆಗೆ, ಪಾಪಚ್ಚಿಯನ್ನು ಕರೆದು, "ಬನ್ನಿ ಹೋಗೋಣ! ಆಮೆಗೆ ಈಗ ಕೊಂಚ ವಿರಾಮವಾಗಿದೆ. ಸ್ನಾನ, ಆಹ್ನಿಕ ಎಲ್ಲಾ ಮುಗಿಸಿ, ಅಡಿಗೆ ಸಿದ್ಧವಾಗುವತನಕ ಕಾದಿರುವ ಸಮಯ ಈಗ. ಬನ್ನಿ!" ಎಂದು ಹೇಳಿ ವೇಗವಾಗಿ ಮುಂದಕ್ಕೆ ಹೋಯಿತು.

ಆ ಕೆರೆಯ ಅಂಚಿನಲ್ಲಿ ಬಿದ್ದಿದ್ದ ಒಂದು ಬೋಳುಬಂಡೆಯ ಮೇಲೆ ಆಸ್ಥಾನದ ಆಮೆ ಕುಳಿತಿತ್ತು. ಅದನ್ನು ನೋಡಿದರೆ ಬಂದವರೊಂದಿಗೆ ಸರಸ ಸಂಭಾಷಣೆಗೆ ಸಿದ್ಧವಾಗಿದ್ದಂತೆ ತೋರುತ್ತಿರಲಿಲ್ಲ. ಬಹಳ ಮನಸ ನೊಂದು ಕಣ್ಣೀರು ಸುರಿಸುತ್ತಾ ನಿಟ್ಟುಸಿರುಬಿಡುತ್ತಾ ಖಿನ್ನವಾಗಿ ನರಳು ತ್ತಿತ್ತು. ಯಾವುದೋ ಒಂದು ನೋವನ್ನು ನುಂಗುತ್ತಿದ್ದ ಹಾಗೆ ತೋರಿತು. "ಪಾಪ! ಇದಕ್ಕೆ ಏನಾಗಿದೆ?" ಎಂದು ಪಾಪಚ್ಚಿ ಮೊಸಳೆಯನ್ನು ಕೇಳಿದಳು. "ಏನೂ ಇಲ್ಲ. ಬರಿಯ ಬೂಟಾಟಿಕೆ, ನಟನೆ! ಅಷ್ಟೆ. ಹಿಟ್ಟು, ಬಟ್ಟೆ ಎರಡೂ ಸುಖವಾಗಿ ಅರಮನೆಯಿಂದ ಸಿಕ್ಕುತ್ತವೆ. ಇನ್ನೇನು ಕೆಲಸ. ನರಳುವುದು, ಅಳುವುದು, ಕಣ್ಣೊರಸಿಕೊಳ್ಳುವುದು. ಶುದ್ಧ ಕಪಟಿ!" ಎಂದು ಮೊಸಳೆ ಹೇಳಿತು. "ಇಂಥವರೂ ಉಂಟೆ?" ಎಂದು ಪಾಪಚ್ಚಿ ಆಶ್ಚರ್ಯಪಟ್ಟಳು.

ಅನಂತರ, ಮೊಸಳೆ ಆಮೆಯ ಹತ್ತಿರ ಕೊಂಚ ಸರಿದು, "ಯಜ ಮಾನರೇ! ತಮ್ಮ ಚರಿತ್ರೆಯನ್ನು ಅಪ್ಪಣೆಕೊಡಿಸಬೇಕೆಂದು ಸನ್ನಿಧಾನದಿಂದ ....." ಎಂದು ಹೇಳಿತು. "ಆಗಬಹುದು. ದಯಮಾಡಿಸಿ. ಹತ್ತಿರ

ಬನ್ನಿ. ಕುಳಿತುಕೊಳ್ಳಿ. ನನಗೆ ವಯಸ್ಸಾಯಿತು. ದೇಹದಲ್ಲಿ ಶಕ್ತಿ ಸಾಲದು. ಗಟ್ಟಿಯಾಗಿ ಮಾತಾಡಲಾರೆ. ಗೂರಲು ಬೇರೆ ಈಚೀಚೆಗೆ ಬಲವಾಗಿದೆ. ಇರಲಿ! ನನ್ನ ಚರಿತ್ರೆ ಹೇಳುವುದರಲ್ಲಿ ನನಗೇನು ಅಭ್ಯಂತರ ವಿಲ್ಲ. ಅದರಲ್ಲೂ ರಾಜಾಜ್ಞೆಯನ್ನು ಮೀರಿ ನಡೆದರೆ ಬದುಕುವುದುಂಟೆ? ಆದರೆ, ಒಂದು,—ನಾನು ಹೇಳಿ ಮುಗಿಸುವತನಕ ನೀವು ಯಾರೂ ಮಾತ ನಾಡಬಾರದು. ನಾನು ಮುದುಕ—ಕೋಪ ಹೆಚ್ಚು'' ಎಂದು ಆಮೆ ಅಳುತ್ತಾ ಹೇಳಿತು.

ಹಾಗೆಯೇ ಆಗಲೆಂದು ಒಪ್ಪಿ, ಇಬ್ಬರೂ ಬಂಡೆಯ ಮೇಲೆ ಮಂಡಿಸಿ ದರು. ಅರೆಗಳಿಗೆಯ ಹೊತ್ತು ಯಾರೂ ಮಾತಾಡಲೇ ಇಲ್ಲ. ''ಕಥೆ ಹೇಳುವುದಕ್ಕೆ ಪ್ರಾರಂಭವೇ ಮಾಡದಿದ್ದರೆ, ಮುಗಿಯುವುದೆಂದಿಗೆ? ಹೀಗೆ ಬಾಯಿಗೆ ಬೀಗಹಾಕಿಕೊಂಡು ಎಷ್ಟು ಹೊತ್ತು ಸುಮ್ಮನಿರುವುದಕ್ಕಾ ದೀತು?'' ಎಂದು ಪಾಪಚ್ಚಿ ಚಿಂತಿಸಿದಳು....ಬೇರೆ ಯಾರೂ ಮಾತಿಗೆ ಸಿಕ್ಕದಿದ್ದರೆ ತನಗೆ ತಾನೇ ಹರಟೆಹೊಡೆದುಕೊಳ್ಳುವ ಹುಡುಗಿ ಹೇಗೆ ಅಷ್ಟು ಹೊತ್ತು ಸುಮ್ಮನಿದ್ದಾಳು?

ಕೊನೆಗೆ ಆಮೆ ನಿಟ್ಟುಸಿರುಬಿಡುತ್ತಾ ಪ್ರಾರಂಭಿಸಿತು. ''ಒಂದಾ ನೊಂದು ಕಾಲದಲ್ಲಿ ನಾನೊಂದು ಪುಟ್ಟ ಆಮೆಯಾಗಿದ್ದೆ. ಪುಟಾಣಿ ಮಗು ವಾಗಿದ್ದೆ.'' ಅಷ್ಟು ಹೇಳಿ ಮತ್ತೆ ಮೌನವನ್ನವಲಂಬಿಸಿತು.

ಎಲ್ಲರೂ ಮಾತಾಡದೆ ತೆಪ್ಪಗಿದ್ದರು. ಮೊಸಳೆ ಮಾತ್ರ ಒಂದೆರಡು ಸಾರಿ 'ಕ್ಗ್ಘ್ರ್' ಎಂದು ಹೇಳಿತು. ಪಾಪಚ್ಚಿಗೆ ಬಹಳ ಬೇಸರಿಕೆಯಾಯಿತು. ತುಂಬಾ ರೇಗಿತು. ''ನಾನು ಹೋಗಿ ಬರುತ್ತೇನೆ, ಸ್ವಾಮಿ! ತಮ್ಮ ಕಥೆ ಬಹಳ ಸ್ವಾರಸ್ಯವಾಗಿತ್ತೆಂದು ರಾಣಿಯವರಿಗೆ ತಿಳಿಸುತ್ತೇನೆ'' ಎಂದು ಹೇಳಿ ಅಲ್ಲಿಂದ ಹೊರಡೋಣವೆನಿಸಿತು. ಆದರೆ, ''ಆಮೆಗೆ ಕೋಪಬಂದರೆ ಏನು ಗತಿ? ಮೊಸಳೆ ಏನು ಮಾಡುವುದೋ?'' ಎಂಬ ಭಯ ಬೇರೆ....

ಆಮೆ ಮತ್ತೆ ಕಥೆಯನ್ನು ಪ್ರಾರಂಭಿಸಿತು. ''ಕೊಂಚ ಬೆಳೆದ ಮೇಲೆ, ಕೈಕಾಲುಗಳು ಗಟ್ಟಿಯಾದ ಮೇಲೆ, ಬೆನ್ನು ಬಲವಾದ ಮೇಲೆ, ನಾವು ಕೆರೆಯ ಪಾಠಶಾಲೆಗೆ ಹೋಗುತ್ತಿದ್ದೆವು. ಅಲ್ಲಿ ನಮಗೆ ಹೊಡೆತವೇ

ಹೊಡೆತ! ಅದಕ್ಕೇ ನನ್ನ ಚರ್ಮ ಇಷ್ಟು ದಪ್ಪವಾಗಿರುವುದು....ನಮಗೆ ಪಾಠಶಾಲೆಯಲ್ಲಿ ಓಡುವುದು, ಬಡಿಯುವುದು, ಕುಣಿತ—ಇವು ಮೂರನ್ನೂ ಕಲಿಸುತ್ತಿದ್ದರು. (ಓದುವುದು, ಬರೆಯುವುದು, ಗಣಿತ—ಇವು ಮೂರರ ಬದಲಾಗಿ ಆಮೆಗಳಿಗೆ ಇಂಥವುಗಳನ್ನು ಹೇಳಿಕೊಡುತ್ತಿರಬಹುದೆಂದು ಪಾಪಚ್ಚಿ ಊಹಿಸಿದಳು!) ಈಜುವುದನ್ನು ಕಲಿಯಬೇಕಾಗಿದ್ದರೆ ಅದಕ್ಕೆ ಪ್ರತ್ಯೇಕವಾಗಿ ಹಣ ಕೊಡಬೇಕಾಗಿತ್ತು. ಆದ್ದರಿಂದ ಈಜನ್ನು ನನಗೆ ನಮ್ಮ ತಾಯಿಯೇ ಕಲಿಸಿಬಿಟ್ಟಳು....ಕುಣಿತದಲ್ಲಿ, ಮೂಡುವುದು, ಮುಳುಗುವುದು, ನೂಣಾಹಾರ, ಹಾಹಾಕಾರ—ಇವು ನಾಲ್ಕೂ ಪರೀಕ್ಷೆಗಿತ್ತು." (ಕೂಡುವುದು, ಕಳೆಯುವುದು, ಗುಣಾಕಾರ, ಭಾಗಾಕಾರ?) "ಹಾಹಾಕಾರ ಎಂದರೆ ಏನು?" ಎಂದು ಪಾಪಚ್ಚಿ ಕೇಳಿದಳು. "ನಿನಗೆ 'ಹಾ! ಹಾ!' ಎಂದು ಹೇಳುವುದಕ್ಕೆ ಬರುತ್ತದೆಯೇ?" ಎಂದು ಮೊಸಳೆ ಕೇಳಿತು. "ಹೂಂ. ಬರುತ್ತೆ" ಎಂದು ಪಾಪಚ್ಚಿ ಹೇಳುತ್ತಲೂ "ಹಾಗಾದರೆ, ಅದಕ್ಕೆ ಕಾರ ಸೇರಿಸಿದರೆ, ಹಾಹಾಕಾರವಾಯಿತು!" ಎಂದು ಆಮೆ ಹೇಳಿಬಿಟ್ಟಿತು. ಆಮೇಲೆ ನಮಗೆ ಮೆರವಣಿಗೆ, ವಿಕೃತಿ ಪ್ರಶಂಸೆ, ಗೇಲಿ ಬರೆಯಿಸುವುದು ಮುಂತಾದ ಪಾಠಗಳೂ ಇದ್ದುವು. ಪಾಪಚ್ಚಿಗೆ ಇದು ಯಾವುದೂ ಅರ್ಥವಾಗಲಿಲ್ಲ. ಆದ್ದರಿಂದ, ಅವಳು "ನಿಮಗೆ ಶಾಲೆಯಲ್ಲಿ ದಿನವೂ ಎಷ್ಟು ಘಂಟೆ ಪಾಠ?" ಎಂದಳು.

"ಓ! ಪಾಠಕ್ಕೇನು ಕಡಮೆ. ಮೊದಲನೆಯ ದಿನ ಹತ್ತು ಘಂಟೆಗಳ ಕಾಲ; ಎರಡನೆಯ ದಿನ ಒಂಬತ್ತು ಘಂಟೆ ಪಾಠ; ಮೂರನೆಯ ದಿನ ಎಂಟು ಗಂಟೆ; ನಾಲ್ಕನೆಯ ದಿನ ಏಳು; ಐದನೆಯದಕ್ಕೆ ಆರು; ಆರಕ್ಕೈದು; ಹೀಗೆ."

"ಹಾಗಾದರೆ, ಹನ್ನೊಂದನೆಯ ದಿನ? ರಜವೋ?"

"ಹೌದು. ಪೂರ್ತ ರಜ."

"ಹನ್ನೆರಡನೆಯ ದಿನ ಏನುಮಾಡುವುದು?"

"ನಾನು ಹನ್ನೆರಡನೆಯ ದಿನದ ಹೊತ್ತಿಗೆ ಪಾಠಶಾಲೆಯನ್ನು ಬಿಟ್ಟುಬಿಟ್ಟಿದ್ದೆ!"

ಆಮೆಗೆ ತನ್ನ ಮೇಲೆ ಕೋಪ ಬಂದದ್ದರಿಂದ ಹೀಗೆ ಹೇಳಿರಬೇಕೆಂದು ಪಾಪಚ್ಚಿಗೆ ತೋರಿತು. ಅವಳು, "ಕ್ಷಮಿಸಿ, ಸಾರ್, ಕೋಪಿಸಿಕೊಳ್ಳ ಬೇಡಿ, ಸಾರ್, ನಾಳೆಯಿಂದ ಹೀಗೆ ಕೇಳುವುದಿಲ್ಲ, ಸಾರ್!" ಎಂದು ಹೇಳಿದಳು. ಅಷ್ಟು ಹೊತ್ತಿಗೆ, ಮೊಸಳೆ, "ಪಾಠದ ವಿಷಯ ಇಷ್ಟು ಸಾಕು, ಸ್ವಾಮಿ! ಇನ್ನು ಆಟದ ವಿಚಾರ ಹೇಳಿ" ಎಂದು ಕೇಳಿಕೊಂಡಿತು.

---

## ಕರಿಯ ಮೀನು ಕುಣಿತ

ಆಮೆಗೆ ಬಹಳ ವ್ಯಸನವಾಯಿತು. ಕಣ್ಣುಗಳನ್ನೊರಸಿಕೊಳ್ಳುತ್ತಾ ಉಕ್ಕಿಬರುತ್ತಿದ್ದ ಸಂಕಟವನ್ನು ನುಂಗುತ್ತಾ "ಪಾಪ! ನಿಮಗೆ ಕರಿಯ ಮೀನು ಕುಣಿತವೆಂದರೆ ಎಷ್ಟು ಆನಂದವಾಗಿರುತ್ತದೆ ಎಂದು ತಿಳಿಯಲವಕಾಶವೇ ಇಲ್ಲ. ಇರಲಿ! ನಾನು ಹೇಳುತ್ತೇನೆ" ಎಂದು ಹೇಳಿತು.

ಪಾಪಚ್ಚಿ—"ಹೌದು. ನನಗೆ ಕರಿಯ ಮೀನೆಂದರೆ ಹೇಗಿರುತ್ತೆ ಅನ್ನುವುದೇ ಗೊತ್ತಿಲ್ಲ."

ಮೊಸಳೆ—"ಚಿಂತೆಯಿಲ್ಲ ಸುಮ್ಮನಿರಿ! ನಾವು ಹೇಳುತ್ತೇವೆ.... ಕರಿಯ ಮೀನು ಕುಣಿತವೆಂದರೆ—ಮೊದಲು ಕೆರೆಯ ಅಂಚಿನ ಮರಳಿನ ಮೇಲೆ ನೆಟ್ಟಗೆ ಒಂದು ಗೆರೆ ಎಳೆಯಬೇಕು."

ಆಮೆ—"ಒಂದು ಸಾಲದು. ಎರಡು ಗೆರೆ ಬೇಕು. ಅದರಲ್ಲಿ, ಹಿಂದಿನ ಗೆರೆಯ ಮೇಲೆ...."

ಮೊಸಳೆ—"ನಾನು ಹೇಳುತ್ತೇನೆ. ಹಿಂದಿನ ಗೆರೆಯ ಮೇಲೆ ಕಪ್ಪೆಗಳು, ಮರಿ ಮೀನುಗಳು, ನೀರು ಹಾವುಗಳು ಇವುಗಳನ್ನು ಹಿಡಿದು ನೆಟ್ಟಗೆ ನಿಲ್ಲಿಸಬೇಕು. ಆಮೇಲೆ...."

ಆಮೆ—"ಇಲ್ಲ, ಆಗಲೇ ಅಲ್ಲ,—ಮಣ್ಣು ಹುಳುಗಳನ್ನೆಲ್ಲಾ ಒದ್ದೋಡಿಸಿದ ಮೇಲೆ...."

ಮೊಸಳೆ—" ಹೂಂ. ಅದನ್ನು ಆಗಲೇ ಹೇಳಬೇಕಾಗಿತ್ತು. ಮರೆತೆ. ಗೆರೆ ಎಳೆಯುವುದಕ್ಕೆ ಮುಂಚೆಯೇ ಮಾಡಬೇಕಾದ ಕೆಲಸ ಅದು. ಇರಲಿ. ಆಮೇಲೆ. . . ."

ಆಮೆ—" ಅವುಗಳನ್ನು ಓಡಿಸುವುದು ಕೊಂಚ ಕಷ್ಟದ ಕೆಲಸ; ತುಂಬಾ ಹೊತ್ತು ಹಿಡಿಯುತ್ತದೆ."

ಮೊಸಳೆ—" ಅಂತು, ಓಡಿಸಲೇ ಬೇಕು. ಬಿಡಬಾರದು. . . . ಅನಂತರ, ಹಿಂದಿನ ಗೆರೆಯ ಮೇಲೆ ನಾವು ನಿಂತುಕೊಂಡು ಮುಂದಿನ ಗೆರೆಗೆ ನಿಧಾನವಾಗಿ ಬರಬೇಕು."

ಆಮೆ—" ಒಬ್ಬೊಬ್ಬರೂ ಒಂದೊಂದು ಕರಿಯ ಮೀನನ್ನು ಕೈಯಲ್ಲಿ ಹಿಡಿದುಕೊಂಡು ಮುಂದೆ ಬರಬೇಕು! . . . ."

ಮೊಸಳೆ—" ತಾಳಕ್ಕೆ ಸರಿಯಾಗಿ ಹೆಜ್ಜೆಯಿಡಬೇಕು. ಅನಂತರ, ಮುಂದಿನ ಗೆರೆಯಿಂದ ಹಿಂದಿನ ಗೆರೆಗೆ ಒಬ್ಬೊಬ್ಬರೂ ಬೇರೆ ಮೀನುಗಳ ಕೈ ಹಿಡಿದುಕೊಂಡು ಬರಬೇಕು."

ಆಮೆ—" ಹಾಗೆಯೇ ಮೂರು ನಾಲ್ಕು ಸಲ ಹಿಂದಕ್ಕೂ, ಮುಂದಕ್ಕೂ ಬಂದ ಮೇಲೆ. . . ."

ಮೊಸಳೆ—" ಒಬ್ಬೊಬ್ಬರು ಒಂದೊಂದು ಮೀನನ್ನು ಬಾಲಹಿಡಿದೆತ್ತಿ ಕೆರೆಯ ನೀರಲ್ಲಿ ಎಸೆಯಬೇಕು."

ಆಮೆ—" ದೂರ ಬೀಳಬೇಕು. . . . ತಕ್ಷಣವೇ. . . ."

ಮೊಸಳೆ—" ಅದರ ಹಿಂದೆಯೇ ನಾವೂ ಹಾರಬೇಕು. ಈಜುತ್ತಾ ಈಜುತ್ತಾ ಅದನ್ನು ಹಿಡಿಯಬೇಕು."

ಆಮೆ—" ಹಿಡಿದುಕೊಂಡೇ ನೀರಿನಲ್ಲಿ ಒಂದು ಲಾಗಹಾಕಬೇಕು."

ಮೊಸಳೆ—" ನಮ್ಮ ಬಾಲದ ತುದಿ ನೀರಿನ ಮೇಲೆ ಕಾಣಿಸುವ ಹಾಗೆ. . . . . ಆಮೇಲೆ ದಡಕ್ಕೆ ಈಜಿ ಬಂದು ಮುಂದಿನ ಗೆರೆಯಮೇಲೆ ನಿಲ್ಲಬೇಕು."

ಆಮೆ—"ಇದೇ, ಕರಿಯ ಮೀನ ಕುಣಿತದಲ್ಲಿ ಮೊದಲನೆಯ ತಾಸ."

ಕುಣಿತವನ್ನು ವಿವರಿಸುವಾಗ ಎರಡು ಪ್ರಾಣಿಗಳೂ ಬಹಳ ಉತ್ಸಾಹದಿಂದ ತಮ್ಮ ಹಳೆಯ ಪಾಠಶಾಲೆಯನ್ನೂ ಅಲ್ಲಿ ಕಳೆದ ಬಾಲ್ಯವನ್ನೂ ನೆನೆದು ಮತ್ತೊಮ್ಮೆ ಸುಖಪಡುತ್ತಿದ್ದುವು. ಆದರೆ, ಹೇಳಿ ಮುಗಿದ ಕೂಡಲೆ ಆಮೆ ಯಥಾಪ್ರಕಾರ ಹಿಂದಿನ ಹಾಗೆಯೇ ಅಳುತ್ತಾ ಕುಳಿತುಕೊಂಡಿತು.

ಪಾಪಚ್ಚಿ (ಸಂತೋಷದಿಂದ)—"ಕರಿಯ ಮೀನು ಕುಣಿತ ನೋಡುವುದಕ್ಕೂ ಆಡುವುದಕ್ಕೂ ತುಂಬಾ ಚೆನ್ನಾಗಿದ್ದಿರಬೇಕು."

ಇಬ್ಬರೂ—"ನೋಡಬೇಕೇನು?"

ಆಮೆ—"ಮೊಸಳಪ್ಪನವರೇ! ಬನ್ನಿ! ಮೊದಲನೆಯ ವರಸೆಯನ್ನು ಆಡಿ ತೋರಿಸೋಣ."

ಮೊಸಳೆ—"ಹೂಂ. ಕರಿಯ ಮೀನಿಲ್ಲದಿದ್ದರೂ ಚಿಂತೆಯಿಲ್ಲ. ಆದರೆ, ಹಾಡಂತೂ ಇದ್ದೇ ಇರಬೇಕು."

ಆಮೆ—"ಯಾರು ಹಾಡುವುದು?"

ಮೊಸಳೆ—"ನೀವೇ ಹಾಡು ಹೇಳಿ. ನನಗೆ ಕೊಂಚ ನೆಗಡಿ. ಶಾರೀರ ಕೆಟ್ಟಿದೆ. ಮಾತುಗಳೂ ಕೂಡ ಅಲ್ಲಲ್ಲಿ ಮರೆತುಹೋಗಿದೆ."

ಆಮೆ—"ಸರಿ! ಗೆರೆ ಎಳೆಯಿರಿ!"

ಆಮೆ ಹಾಡುವುದಕ್ಕೆ ಪ್ರಾರಂಭಮಾಡಿತು. ಮೊಸಳೆ ಕುಣಿಯಿತು.

ಆಮೆಗಳೇ! ಮೊಸಳೆಗಳೇ! ಜಲಜರಾದ ಪ್ರಾಣಿಗಳೇ!
ಕಪ್ಪೆಗಳೇ! ಮೀನುಗಳೇ! ಮಲಜರಾದ ಜಂತುಗಳೇ!
ಬೇಗನೇಳಿ! ತಾಳಬೇಡಿ! ಮೀನಕುಣಿತ ಕುಣಿಯುವಾ!
ಮರಳಿನಲಿ ಹೊನಲಿನಲಿ ಲೀನರಾಗಿ ನಲಿಯುವಾ!
ಬರದಿರದಿರಿ, ಬರದಿರದಿರಿ! ಬರದಿರದಿರಿ, ಬನ್ನಿರಿ!
ಬರದಿರದಿರಿ, ಬರದಿರದಿರಿ! ಬರದಿರದಿರಿ, ಬನ್ನಿರಿ!!

ನೊರೆಯ ಹಾಲಿನಂದದಲಿ ಕೆರೆಯ ಕೆಂಪು ನೀರಿನಲಿ
ಮುಳುಗಿ ಮುಳುಗಿ ಸುಳಿಯುವಾ! ನಲಿದು ನಲಿದು ಕುಣಿಯುವಾ!
ಆಮೆ ಮೊಸಳೆ ಹೆಗಲಿನಲಿ, ಮಿಣುಕು ಹುಳದ ಬೆಳಕಿನಲಿ

ಬಯುವ ಬಿಟ್ಟು ನೆಗೆಯುವಾ! ಮುದದಿ ನಕ್ಕು ಮುಳುಗುವಾ!
ಬರದಿರದಿರಿ, ಬರದಿರದಿರಿ! ಬರದಿರದಿರಿ, ಬನ್ನಿರಿ!
ಬರದಿರದಿರಿ, ಬರದಿರದಿರಿ! ಬರದಿರದಿರಿ, ಬನ್ನಿರಿ!!

ಈ ಹಾಡನ್ನು ಕೇಳಿ ಪಾಪಚ್ಚಿಗೆ ಪರಮಾನಂದವಾಯಿತು. "ನಾನಿದನ್ನು ನನ್ನ ಪುಸ್ತಕದಲ್ಲಿ ಬರೆದಿಟ್ಟುಕೊಳ್ಳಬೇಕು" ಎಂದಳು. "ಅಗತ್ಯವಾಗಿ ಆಗಬಹುದು" ಎಂದು ಆಮೆ ಹೇಳಿತು. ಮೊಸಳೆಗೆ, ಪಾಪ, ಬಹಳ ಆಯಾಸ. ಕುಣಿತದ ರೀತಿಯನ್ನು ತೋರಿಸುವಾಗ ಹಿಂದಕ್ಕೂ ಮುಂದಕ್ಕೂ ಹಾರಿಹಾರಿ ಮೈ ತುಂಬಾ ಬೆವರುತ್ತಿತ್ತು.

ಆಗ, ಆಮೆ ಪಾಪಚ್ಚಿಯನ್ನು ಕುರಿತು, "ಈಗ **ನಿಮ್ಮ** ಕಥೆಯನ್ನು **ನಮಗೆ** ಕೊಂಚ ಹೇಳಿ!" ಎಂದು ಕೇಳಿಕೊಂಡಿತು. ಮೊಸಳೆಯೂ ಹತ್ತಿರ ಬಂತು. ಕುಳಿತುಕೊಂಡಿತು. ತನ್ನ ಮೇಲಿನ ಪ್ರೀತಿಯಿಂದ ಈ ಮುದಿತನದಲ್ಲೂ ಇಷ್ಟು ಚೆನ್ನಾಗಿ ಕುಣಿದು ಹಾಡಿ ತೋರಿಸಿದ ಆ ಎರಡು ಪ್ರಾಣಿಗಳ ಮಾತನ್ನು ನಿರಾಕರಿಸಲು ಪಾಪಚ್ಚಿಯ ಮನಸ್ಸು ಒಪ್ಪಲಿಲ್ಲ. ತಾನು ಮೊಲದ ಹಿಂದೆ ಬಿಲದೊಳಗೆ ಧುಮುಕಿದ್ದು ಮೊದಲುಗೊಂಡು ನಡೆದ ಸಂಗತಿಯೆಲ್ಲವನ್ನೂ ಒಂದೂ ಬಿಡದೆ ಹೇಳತೊಡಗಿದಳು. ಮೊದ ಮೊದಲು ಅವಳಿಗೆ ಕೊಂಚ ಹೆದರಿಕೆಯಾಯಿತು. ಏಕೆಂದರೆ, ಆಮೆಯೂ ಮೊಸಳೆಯೂ ಕಥೆ ಕೇಳುತ್ತಾ ಕೇಳುತ್ತಾ ಹತ್ತಿರ ಹತ್ತಿರಕ್ಕೆ ಸರಿಯುತ್ತಿದ್ದುವು. ಅದೂ ಅಲ್ಲದೆ, ಕಥೆ ಮುಂದು ಮುಂದಕ್ಕೆ ಸಾಗಿದ ಹಾಗೆಲ್ಲಾ ಇಬ್ಬರೂ ಬಾಯನ್ನು ಹೆಚ್ಚು ಹೆಚ್ಚಾಗಿ ತೆರೆಯುತ್ತಾ ಬಂದುವು.

ಹಸುರು ಹುಳುವಿನ ಹೇಳಿಕೆಯ ಮೇರೆ ತಾನು ಗೋವಿನ ಹಾಡಿನ ಪಾಠ ಒಪ್ಪಿಸಿದ್ದನ್ನು ಪಾಪಚ್ಚಿ ಪ್ರಸ್ತಾವಿಸಿದಾಗ ಅವರು "ನಮಗೂ ಆ ಹಾಡನ್ನು ಕೇಳಬೇಕೆಂದು ಆಸೆ!" ಎಂದರು. ಹಿಂದೆ ಹೇಳಿದಂತೆಯೇ ಪಾಪಚ್ಚಿ ಈಗಲೂ ತಪ್ಪು ತಪ್ಪಾಗಿಯೇ ಹೇಳಿಬಿಟ್ಟಳು. ಅವಳಿಗೆ ಯಾಕೋ ಯಾವ ಪದ್ಯವನ್ನೂ ಸರಿಯಾಗಿ ಹೇಳಲಾಗಲಿಲ್ಲ.—

ತಾತ ಕರೆದ ಧ್ವನಿಯ ಕೇಳಿ
ಎಲ್ಲ ಹುಡುಗರು ಕೆರೆಗೆ ಬಿದ್ದು

ಮೂತಿಯನ್ನು ಮರೆಸಿಕೊಂಡು
ಅಲ್ಲಿ ಮುಳುಗಲು ಭಯದಲಿ

ಎಂದು ಹೇಳಿ, ನಾಚಿಕೆಯಿಂದ ಪಾಪಚ್ಚಿ ಅಲ್ಲಿಗೇ ಪದ್ಯವನ್ನು ಮುಗಿಸಿಬಿಟ್ಟಳು. "ಇದೇನಿದು? ಬಹಳ ವಿಚಿತ್ರವಾಗಿದೆ. ನಾವು ಕಲಿತ ರೀತಿಯೇ ಬೇರೆ. ನೀವು ಹೇಳುವುದೇ ಬೇರೆ. ಈಚೀಚೆಗೆ ಇಷ್ಟು ಬದಲಾವಣೆಗಳಾಗಿಬಿಟ್ಟಿವೆಯೋ? ಇನ್ನೊಂದು ಪದ್ಯ ಹೇಳಿ ನೋಡೋಣ. ನಿಮಗೆ ಮಾಂಬಿಯ ಕಥೆ ಬಾಯಿಗೆ ಬರುತ್ತೋ?" ಎಂದು ಆಮೆ ಕೇಳಿತು. "ಇಲ್ಲ. ಆದರೆ ಬೊಮ್ಮಸಹಳ್ಳಿಯ ಕಿಂದರಿ ಜೋಗಿ ಹೇಳಲೇ?" ಎಂದು ಪಾಪಚ್ಚಿ ಕೇಳಿದಳು. "ಆಗಬಹುದು" ಎಂದು ಮೊಸಳೆ ಹೇಳಿತು.

"ಗಂಗೆಯ ನೀರಿನ ಒಳಗಡೆಯಲ್ಲಿ"

ಯಾಕೋ, ಏನೋ, ಕರಿಯ ಮೀನು ಕುಣಿತದ ವಿಷಯ ಕೇಳಿದಾಗಿನಿಂದ, ಕೆರೆ, ನೀರು, ಮುಳುಗುವುದು, ಇವೇ ಅವಳ ತಲೆಯಲ್ಲಿ ತುಂಬಿಹೋಗಿತ್ತು ಅಂತ ಕಾಣುತ್ತೆ.

"ಗಂಗೆಯ ನೀರಿನ ಒಳಗಡೆಯಲ್ಲಿ
ಹಿಂದಲ್ಲಿದ್ದುದು ಮೀನಿನ ಸೇನೆ.
ಅಲ್ಲೇನಾಮೆಯ ಕಾಟವೆ ಕಾಟ
ಅಲ್ಲಿಯ ಮೀನ್‌ಗಳ ಗತಿ ಗೋಳಾಟ.
ಆಮೆಯು ಬಾಲವ ನೀಡುತ ಬೇಗ
ಹಿಂಡಿತು ಮೀನಿನ ಹಳದಿಯ ಮೂಗ....
........................."

ಈ ಪದ್ಯವನ್ನು ಕೇಳುತ್ತಲೂ ಆಮೆಗೆ ಬಹಳ ಕೋಪ ಬಂತು. "ಸಾಕು! ನಿಲ್ಲಿಸು. ಏನು ಹುಚ್ಚುಗಿಚ್ಚು ಹಿಡಿದಿದೆಯೋ? ಬಾಲದಿಂದ ನಾನು ಮೀನಿನ ಮೂಗನ್ನು ಹಿಂಡುವುದೆಂದರೇನು? ಶುದ್ಧ ಅಸಂಬದ್ಧ! ತೀರ ಅಸಾಧ್ಯ!" ಎಂದು ತುಂಬ ರೇಗಿತು. ಮೊಸಳೆಗೆ ಮಾತ್ರ ಇನ್ನೂ ಅಷ್ಟು ಕೋಪ ಬಂದಿರಲಿಲ್ಲ. ಕೊಂಚ ಕನಿಕರ ಉಳಿದಿತ್ತು. "ಎಲ್ಲಿ, ಅಮ್ಮ, 'ಗಜವದನ ಹೇರಂಬ' ಹೇಳು" ಎಂದಿತು. ಪಾಪಚ್ಚಿ ಎದ್ದು ನಿಂತು

ಕೈಮುಗಿದುಕೊಂಡು, "ಜಗದವನ ಹೇ ಜಂಬ" ಎಂದಳು. ಮೊಸಳೆಗೂ ಕೋಪದಿಂದ ಕಣ್ಣು ಕೆಂಪಗಾಯಿತು.

ದೇವರ ದಯೆಯಿಂದ ಆಗ ಯಾರೋ ಗಟ್ಟಿಯಾಗಿ "ಎಲ್ಲರೂ ಬನ್ನಿ! ವಿಚಾರಣೆ ಪ್ರಾರಂಭ!" ಎಂದು ಕೂಗಿದರು. ಮೊಸಳೆ ಪಾಪಚ್ಚಿಯನ್ನೂ ಎಳೆದುಕೊಂಡು, ಆಮೆಗೆ "ಹೋಗಿಬರುತ್ತೇನೆ" ಎಂದು ಕೂಡ ಹೇಳದೆ, ಒಂದೇ ಸಮನಾಗಿ ಆ ಕೂಗು ಹೊರಟ ಕಡೆಗೆ ಓಡಿತು.

---

## ಬೋಂಡ ಕದ್ದವರು ಯಾರು?

ವಿಚಾರಣೆಗೆಂದು ನ್ಯಾಯಾಸ್ಥಾನವನ್ನು ಪ್ರತ್ಯೇಕವಾಗಿ ಏರ್ಪಾಡು ಮಾಡಿದ್ದರು. ರಾಜನೂ ರಾಣಿಯೂ ಪಕ್ಕ ಪಕ್ಕದಲ್ಲಿಯೇ ಸಿಂಹಾಸನ ಗಳ ಮೇಲೆ ಆಗಲೇ ಕುಳಿತುಬಿಟ್ಟಿದ್ದರು. ಅವರ ಸುತ್ತ ದೊಡ್ಡದೊಂದು ಸಭೆ ಸೇರಿತ್ತು. ಸಣ್ಣ ಹಕ್ಕಿಗಳು, ಮೃಗಗಳು, ಹುಳುಗಳು, ಮನುಷ್ಯರು ಎಲ್ಲರೂ ನೆರೆದಿದ್ದರು. ಸಭಾಮಂಟಪವನ್ನು ಬಳಸಿ ಸಿಪಾಯಿಗಳೂ ಅಧಿಕಾರಿ ಗಳೂ ನಿಂತಿದ್ದರು. ಒಂದು ಕಟ್ಟು ಇಸ್ಪೀಟಿನಲ್ಲಿರುವ ಚೀಟಿಗಳೆಲ್ಲವೂ ಸಾಲಾಗಿ ನಿಂತಹಾಗೆ ಅವರು ಕಾಣಿಸಿದರು. ಸನ್ನಿಧಾನದಲ್ಲಿಯೇ, ಕೊಂಚ ದೂರವಾಗಿ, ಮಂತ್ರಿಯನ್ನು ಹಿಡಿದು ನಿಲ್ಲಿಸಿದ್ದರು. ಅವನ ಎಡ ಬಲಗಳಲ್ಲಿ ಇಬ್ಬರು ಯೋಧರು ಕತ್ತಿಯನ್ನೆತ್ತಿ ಹಿಡಿದು ಕಾವಲಿದ್ದರು. ಮಂತ್ರಿಯ ಕೈಗೆ ಬೇಡಿಹಾಕಿತ್ತು. ರಾಜನ ಸಿಂಹಾಸನದ ಹಿಂದೆ ಹತ್ತಿರದಲ್ಲಿಯೇ ಬಿಳಿಯ ಮೊಲ ನಿಂತಿತ್ತು. ಅದರ ಒಂದು ಕೈಯಲ್ಲಿ ದೊಡ್ಡದೊಂದು ತುತ್ತೂರಿ, ಇನ್ನೊಂದರಲ್ಲಿ ದಪ್ಪ ಬಾದಾಮಿ ಕಾಗದದ ಸುರುಳಿ!

ಮಂತ್ರಿಯ ಮುಂಭಾಗದಲ್ಲಿ, ಸಭಾ ಮಧ್ಯದಲ್ಲಿ, ಮೇಜಿನ ಮೇಲೆ ಎಲ್ಲರಿಗೂ ಕಾಣುವ ಹಾಗೆ ಒಂದು ತಟ್ಟೆಯನ್ನಿರಿಸಿ, ಅದರಲ್ಲಿ ಎಂಟೊಂಬತ್ತು ಬೊಂಬಾಯಿ ಬೋಂಡಗಳನ್ನಿಟ್ಟಿದ್ದರು. "ವಿಚಾರಣೆಯನ್ನು ಬೇಗ ಬೇಗ ಮುಗಿಸಿ ತಿಂಡಿ ಹಂಚಿದರೆ ವಾಸಿ" ಎಂದು ಪಾಪಚ್ಚಿ ಮೊಸಳೆಯ ಹತ್ತಿರ

ಹೇಳಿದಳು. ಆದರೆ, ಅದು ಅವಳ ಮಾತಿಗೆ ಕಿವಿಗೊಡಲಿಲ್ಲ. ಏಕೆಂದರೆ, ರಾಣಿ ಆಗ ಅವರ ಕಡೆಗೇ ನೋಡುತ್ತಿದ್ದಳು.

ಇನ್ನೂ ಎಲ್ಲರೂ ವಿಚಾರಣೆಗೆ ಅಣಿಮಾಡುತ್ತಿದ್ದರು. ಆದ್ದರಿಂದ, ಪಾಪಚ್ಚಿ ನ್ಯಾಯಾಸ್ಥಾನವನ್ನು ಸಾವಕಾಶವಾಗಿ ಒಂದು ಸುತ್ತು ನೋಡಿದಳು.

ವಕೀಲರುಗಳು ಹಾಕಿಕೊಳ್ಳುವ ಕಪ್ಪು ಬಣ್ಣದ ದೊಗಲು ತೋಳಿನ ಉದ್ದವಾದ ಅಂಗಿಯನ್ನು ರಾಜನು ಧರಿಸಿದ್ದನು. ಅವನ ಎಡಗಡೆಯಲ್ಲಿ ಹನ್ನೆರಡು ಕುರ್ಚಿಗಳನ್ನು ಸಾಲಾಗಿ ಇಟ್ಟಿದ್ದರು. ಅವುಗಳಲ್ಲೊಂದೊಂದ ರಲ್ಲಿಯೂ ಒಂದೊಂದು ಪ್ರಾಣಿ ಆಗಲೇ ಕುಳಿತಿತ್ತು. ಎಲ್ಲರೂ ಗಂಭೀರ ವಾಗಿ, ನ್ಯಾಯಾಸ್ಥಾನದಲ್ಲಿ ತಮಗೂ ಯಾವುದೋ ದೊಡ್ಡ ಅಧಿಕಾರ ವಿರುವಂತೆ ಪೀಠಸ್ಥರಾಗಿದ್ದರು. ಅವರು ಯಾರೆಂದು ಪಾಪಚ್ಚಿ ಮೊಸಳೆ ಯನ್ನು ವಿಚಾರಿಸಿದಳು. "ಅವರಿಗೆ ಪಂಚಾಯತರೆಂದು ಹೆಸರು. ನಿಮ್ಮೂರಲ್ಲಿ ಇಂತಹವರಿಲ್ಲವೆಂದು ಕಾಣುತ್ತೆ. ನಮ್ಮೂರಿಗೂ ಹೊಸದು. ನಮ್ಮ ರಾಜನು ಈಗ ನಾಲ್ಕೈದು ವರ್ಷಗಳಲ್ಲಿ ಹೊಸದಾಗಿ ಈ ಪಂಚಾಯತರನ್ನು ಸ್ಥಾಪಿಸಿದನು. ಪಶ್ಚಿಮ ದೇಶಗಳಲ್ಲಿ ಅಪರಾಧಿಯನ್ನು ವಿಚಾರಣೆಮಾಡುವಾಗ, ನ್ಯಾಯಾಧೀಶನ ಸಹಾಯಕ್ಕಾಗಿ ಹನ್ನೆರಡು ಜನ ದೊಡ್ಡ ಮನುಷ್ಯರನ್ನು ಬರಮಾಡಿಕೊಳ್ಳುವರಂತೆ. ಅಪರಾಧಿ ತಪ್ಪಿತಸ್ಥನೋ ಅಲ್ಲವೋ ಎಂದು ಅವರು ತೀರ್ಮಾನಿಸುವರು. ಅನಂತರ, ರಾಜನು ಅವನಿಗೆ ದಂಡನೆಯನ್ನು ವಿಧಿಸುತ್ತಾನೆ, ಅಷ್ಟೆ! ಇವರೆಲ್ಲರೂ ಪಂಚಾಯತರು" ಎಂದು ಮೊಸಳೆ ಪಾಪಚ್ಚಿಗೆ ತಿಳಿಯಹೇಳಿತು.

ಅವರೆಲ್ಲರಿಗೂ ಒಂದೊಂದು ಸ್ಲೇಟನ್ನೂ ಒಂದೊಂದು ಬಳಪದ ಚೂರನ್ನೂ ಕೊಟ್ಟಿದ್ದರು. ಆಗಲೇ ಅವರು ಏನೇನೋ ಬರೆಯುತ್ತಿದ್ದರು. "ಪಾಪ! ತಮ್ಮ ತಮ್ಮ ಹೆಸರುಗಳನ್ನು ಮೊದಲು ಬರೆದಿಡುತ್ತಿದ್ದಾರೆ. ಇಲ್ಲದಿದ್ದರೆ, ವಿಚಾರಣೆ ಮುಗಿಯುವುದರೊಳಗಾಗಿ ಅವರಿಗೆ ತಮ್ಮ ಹೆಸರು ಮರೆತುಹೋಗುವ ಸಂಭವವುಂಟು. ಆಮೇಲೆ, ತಾವು ಯಾರೆಂದು ಪತ್ತೆಮಾಡುವುದೇ ಅವರಿಗೆ ಕಷ್ಟವಾಗುತ್ತೆ" ಎಂದು ಮೊಸಳೆ

ಹೇಳಿತು. "ಥೂ! ಮಂಕು ಪಟಾಲಂ" ಎಂದು ಪಾಪಚ್ಚಿ ಗಟ್ಟಿಯಾಗಿ ಹೇಳಿದಳು. ಅವರಿಗೆ ಕೇಳಿಸಿದರೂ ಕೇಳಿಸಲಿ ಎಂದು ಅವಳು ಕೊಂಚ ಗಟ್ಟಿಯಾಗಿಯೇ ಹೇಳಿದಳು. ಆದರೆ, ಮೊಲವು "ಆಸ್ಥಾನದಲ್ಲಿ ಯಾರೂ ಅಪ್ಪಣೆಯಿಲ್ಲದೆ ಮಾತಾಡಕೂಡದು! ಎಲ್ಲರೂ ಕೈಕಟ್ಟಿ ಬಾಯಿಮುಚ್ಚಿ ಕೊಂಡಿರಬೇಕು" ಎಂದು ಸಾರಿತು. ರಾಜನೂ ಕನ್ನಡಕವನ್ನು ಮೂಗಿನ ಮೇಲೆ ಏರಿಸಿ ಮಾತನಾಡಿದವರಾರೆಂದು ಸುತ್ತಲೂ ನೋಡಿದನು.

ಪಾಪಚ್ಚಿ ಪಂಚಾಯತರ ಬೆನ್ನ ಹಿಂದೆ ಮರೆಯಾಗಿ ನಿಂತಳು. ಅವರು ಬರೆಯುತ್ತಿರುವುದು ಏನೆಂದು ಇಣಿಕಿನೋಡಿದಳು. ಒಬ್ಬೊಬ್ಬರು ಒಂದೊಂದು ಲಿಪಿಯಲ್ಲಿ ಬರೆದುಕೊಳ್ಳುತ್ತಿದ್ದರು. ಹಲ್ಲಿಯ ಲಿಪಿಯೇ ಬೇರೆ; ಅಳಿಲ ಲಿಪಿಯೇ ಬೇರೆ. ಇಬ್ಬರು ಮಾತ್ರ ಕನ್ನಡದಲ್ಲಿ ಬರೆಯು ತ್ತಿದ್ದರು. ಅವರಲ್ಲೊಬ್ಬರು "ಮಂಗನ ಪಟಾಲಂ" ಎಂದೂ ಇನ್ನೊಬ್ಬರು "ಮಂಕು ವಠಾರಂ" ಎಂದೂ ಬರೆಯುತ್ತಿದ್ದರು!

ಒಬ್ಬ ಪಂಚಾಯತನು ಸ್ಲೇಟಿನಮೇಲೆ ಬಳಪದಿಂದ ಬರೆಯುವಾಗ ತುಂಬಾ ಗಿಚಿಗಿಚಿ ಧ್ವನಿಯಾಗುತ್ತಿತ್ತು. ಪಾಪಚ್ಚಿಗೆ ಯಾವಾಗಲೂ ಆ ಧ್ವನಿ ಕೇಳಿದರೆ ರೇಗುವುದು. ಶಾಮು ಯಾವಾಗಲಾದರೂ ಕೀಟಲೆ ಗೋಸ್ಕರ ಆ ಸದ್ದನ್ನು ಮಾಡಿ ಅವಳನ್ನು ರೇಗಿಸುವುದುಂಟು. "ಇಲ್ಲಿ ಬಂದರೂ ಇದೇ ಗೋಳು" ಎಂದು ಹೇಳುತ್ತಾ ಅವಳು ಆ ಪಂಚಾಯತನ ಹಿಂದೆ ಹೋಗಿ ಸದ್ದುಮಾಡದೆ ಅದರ ಬಳಪವನ್ನು ಕಿತ್ತು ಎಸೆದುಬಿಟ್ಟಳು. ಪಾಪ! ಅದು ಎತ್ತೆತ್ತಲೋ ನೋಡಿ ಏನೂ ತೋಚದೆ, ರಾಣಿಯ ಶಿಕ್ಷೆಗೆ ಹೆದರಿ, ತನ್ನ ಬೆರಳಿನಿಂದಲೇ ಸ್ಲೇಟಿನ ಮೇಲೆ ಬರೆಯಲು ಪ್ರಾರಂಭಿಸಿತು.

"ಗುಮಾಸ್ತರೇ! ಫಿರ್ಯಾದನ್ನು ಓದಿ!" ಎಂದು ರಾಜನು ಮೊಲವನ್ನು ಕರೆದು ಅಪ್ಪಣೆಮಾಡಿದನು. ಮೊಲ ಮೊದಲು ತುತ್ತೂರಿ ಯನ್ನು ಬಾಯಿಗೆ ಹಿಡಿದು, "ತು....ತು....ತೂ, ಥೂ" ಎಂದು ಮೂರುಸಲ ಊದಿ, ಅನಂತರ,

ಇಸ್ಪೀಟ್ರಾಣಿ ಮಾಡಿದ ಬೋಂಡ
ಬೊಂಬಾಯ್ ಬೋಂಡಗಳೇಳೆಂಟು

ಮಂತ್ರಿಯು ಜೇಬಿಗೆ ಸೇರಿಸಿಕೊಂಡ
ಬಂದೇ ಬಂತು ವಾರಂಟು

ಎಂದು ಕೂಗಿಹೇಳಿತು. ರಾಜನು ಸರ್ರನೆ ಪಂಚಾಯತರ ಕಡೆ ತಿರುಗಿ, "ಮಂತ್ರಿ ತಪ್ಪಿತಸ್ಥನೋ ಅಲ್ಲವೋ?" ಎಂದು ಕೇಳಿದನು. ಆಗ ಮೊಲ "ಮಹಾಸ್ವಾಮಿ! ದುಡುಕಬೇಡಿ. ಇನ್ನೂ ಅನೇಕ ಶಾಸ್ತ್ರಗಳು ನಡೆಯ ಬೇಕಾಗಿವೆ. ಸಾಕ್ಷಿಗಳು ಕಾದಿದಾರೆ" ಎಂದು ಹೇಳಿತು.

"ಹಾಗಾದರೆ ಮೊದಲನೆಯ ಸಾಕ್ಷಿಯನ್ನು ಕರೆಯಿರಿ!" ಎಂದು ರಾಜನು ಹೇಳಲು, ಮೊಲ ಮೂರುಸಲ ತುತ್ತೂರಿಯನ್ನೂದಿ, "ಮೊದಲ ನೆಯ ಸಾಕ್ಷಿ—ವೆಂಕಟರಮಣಪ್ಪಾ, ವೆಂಕಟರಮಣಪ್ಪಾ, ವೆಂಕಟ ರಮಣಪ್ಪಾ," ಎಂದು ಕೂಗಿತು.

ಟೋಪಿಯಂಗಡಿಯವನೇ ವೆಂಕಟರಮಣಪ್ಪ! ಆತನೇ ಮೊದಲನೆಯ ಸಾಕ್ಷಿ. ಅವನು ಕೈಯಲ್ಲಿ ಒಂದು ಲೋಟ ಕಾಫಿಯನ್ನೂ ಬಾಯಲ್ಲಿ ಒಂದು ಚೂರು ದೋಸೆಯನ್ನೂ ಹಿಡಿದುಕೊಂಡೇ ನ್ಯಾಯಸ್ಥಾನವನ್ನು ಪ್ರವೇಶಿಸಿದನು. ಅವನ ಹಿಂದೆಯೇ, ಅವನ ಪ್ರಿಯ ಮಿತ್ರನಾದ ಅಳಿಲು ಎಮ್ಮೆಕರುವಿನ ಮೇಲೆ ಸವಾರಿಮಾಡುತ್ತಾ ಒಳಗೆ ನುಗ್ಗಿತು.

ಟೋಪಿಯವನು, "ಮಹಾಸ್ವಾಮಿಯವರಿಗೆ ಅಡ್ಡಬಿದ್ದೆ. ಬೇಗ ಬರಬೇಕೆಂದು ಪೋಲೀಸಪ್ಪನವರು ಹೇಳಿದರು. ತಿಂಡಿ ತಿಂದು ಮುಗಿದಿರ ಲಿಲ್ಲ. ಹಾಗೆಯೇ ಬಂದುಬಿಟ್ಟೆ" ಎಂದು ಹೇಳಿದನು. ರಾಜನು, "ಯಾವಾಗ ನೀನು ತಿಂಡಿಗೆ ಕುಳಿತದ್ದು?" ಎಂದು ಕೇಳಿದಾಗ, "ಜನವರಿ ಹದಿಮೂರಕ್ಕೆ, ಮಹಾಸ್ವಾಮಿ!" ಎಂದು ಉತ್ತರಕೊಟ್ಟನು. "ಅಲ್ಲ, ಮಹಾಸ್ವಾಮಿ! ಶುದ್ಧ ಸುಳ್ಳು. ಅವನು ಪ್ರಾರಂಭಿಸಿದ್ದು ಜನವರಿ ಇಪ್ಪತ್ತುನಾಲ್ಕಕ್ಕೆ, ಮಹಾಸ್ವಾಮಿ!" ಎಂದು ಅಳಿಲು ಹೇಳಿತು.

"ಅದನ್ನು ಬರೆದುಕೊಳ್ಳಿ! ಬಹಳ ಮುಖ್ಯವಾದ ರುಜುವಾತು ಸಿಕ್ಕಿದಹಾಗಾಯಿತು!" ಎಂದು ರಾಜನು ಪಂಚಾಯತ್ಗರಿಗೆ ಹೇಳಿದನು. ಕೂಡಲೇ, ಅವರೆಲ್ಲರೂ ಎರಡು ಅಂಕಿಗಳನ್ನೂ ಬರೆದು, ಕೂಡಿ, ಒಟ್ಟನ್ನು

ಜೇಗನೆ ರೂಪಾಯಿ, ಆಣೆ, ಪೈಯಾಗಿ ಮಾಡಿಟ್ಟರು. ಬಲು ಜಾಣರು. ಗಣಿತ ಅಂದರೆ ಅವರಿಗೆ ನೀರು ಕುಡಿದಹಾಗೆ—

```
     13
     24
16) 37 (1 ರೂಪಾಯಿ
     16
12) 21 (1 ಆಣೆ
     12
      9 ಪೈ

ರೂ. ಆ. ಪೈ
1—1—9 ಉತ್ತರ.
```

ವೆಂಕಟರಮಣಪ್ಪನವರ ತಲೆಯ ಮೇಲಿದ್ದ ಟೋಪಿಯ ಗೋಪುರವನ್ನು ನೋಡಿ, ಮೊಲವು, "ಆಸ್ಥಾನದಲ್ಲೂ ಇಂಥಾ ಅನಾಚಾರವೇ? ತೆಗಿ ಟೋಪಿ!" ಎಂದು ಆಜ್ಞಾಪಿಸಿತು. "ಅವು ನನ್ನವಲ್ಲ, ಮಹಾಸ್ವಾಮಿ!" ಎಂದು ಟೋಪಿಯವನು ವಿನಯದಿಂದ ಹೇಳಿದನು. ಹುಚ್ಚಿನ ಯಾವ ಚಿಹ್ನೆಯೂ ಅವನ ನಡೆನುಡಿಗಳಲ್ಲಿರಲಿಲ್ಲ. ಆದ್ದರಿಂದ, ಇದನ್ನು ಕೇಳಿದ ಕೂಡಲೇ ರಾಜನು ಕುಪಿತನಾಗಿ, "ಓಹೋ! ತಿಳಿಯಿತು. ಕದ್ದ ಮಾಲಿರಬೇಕು!" ಎಂದು ಕೂಗಿದನು. ಪಂಚಾಯತರೆಲ್ಲರೂ ಅದನ್ನು ಜಾಗ್ರತೆಯಾಗಿ ಬರೆದುಕೊಂಡರು. ಟೋಪಿಯವನು, "ಕದ್ದ ಮಾಲಲ್ಲ, ಬುದ್ಧಿ. ಮಾರುವುದಕ್ಕೆ ತಲೆಯ ಮೇಲಿಟ್ಟುಕೊಂಡು ಬೀದಿ ಬೀದಿ ತಿರುಗುತ್ತಿದ್ದೇನೆ, ಬುದ್ಧಿ" ಎಂದು ಹೇಳಿ, ರಾಣಿಯ ಕಡೆ ತಿರುಗಿದನು. ಇದುವರೆಗೂ ರಾಣಿ ಕೋಪಿಸಿಕೊಳ್ಳದೆ ಸುಮ್ಮನಿದ್ದುದೇ ಆಶ್ಚರ್ಯ. ಅವಳು ತನ್ನ ಗಂಡನ ಕನ್ನಡಕವನ್ನು ಹಾಕಿಕೊಂಡು ಟೋಪಿಯವನನ್ನೇ ದುರುದುರನೆ ದಿಟ್ಟಿಸಿದಳು. ಪಾಪ! ಅವನಿಗೆ ತುಂಬಾ ಹೆದರಿಕೆ ಹತ್ತಿಕೊಂಡಿತು. ನಡುಗಿದನು. ಗೋಪುರವೂ ನಡುಗಿತು. ಆಕಡೆ, ಈಕಡೆ ಅಲ್ಲಾಡಿತು. ರಾಣಿಗೂ ಬಹಳ ರೋಷಬಂತು. "ನಿನ್ನ ತಲೆಬುರುಡೆ ಉರುಳಿಸಿಬಿಡುತ್ತೇನೆ. ಆಮೇಲೆ ನೀನು ನಿನ್ನ ಟೋಪಿಗಳನ್ನು ಹೇಗೆ

ಹೊತ್ತುಕೊಂಡು ತಿರುಗುತ್ತೀಯೆ, ನೋಡುತ್ತೇನೆ" ಎಂದು ರಾಣಿ ಗದರಿಸಿದಳು.

ಟೋಪಿಯವನಿಗೆ ಇದ್ದಕ್ಕಿದ್ದ ಹಾಗೆ ಕಣ್ಣಲ್ಲಿ ಧಾರೆಧಾರೆಯಾಗಿ ನೀರು ಬಂತು. "ನನ್ನ ಜೀವ ಉಳಿಸಬೇಕು, ಮಹಾಸ್ವಾಮಿ! ನನ್ನದು ಅಂಥಾ ಇಂಥಾ ಜೀವ ಅಲ್ಲ, ಮಹಾಸ್ವಾಮಿ! ಬಡ ಜೀವ, ನಾನು ಪರದೇಶಿ,—ಮಹಾಸ್ವಾಮಿ. ಅನೇಕರಿಗೆ, ನಿಮ್ಮಂಥಾ ಪ್ರಭುಗಳಿಗೆ ಇನ್ನೂ ಟೋಪಿಹಾಕಬೇಕಾಗಿದೆ, ಮಹಾಸ್ವಾಮಿ. ನನಗೆ ಈ ಮೊಕದ್ದಮೆಯ ವಿಚಾರವಾಗಿ ಏನೂ ತಿಳಿಯದು, ಮಹಾಸ್ವಾಮಿ. ನಾನು ತಿಂಡಿ ತಿಂದು ಮುಗಿಸುತ್ತೇನೆ. ಅರ್ಧದಲ್ಲಿ ಎದ್ದುಬಂದೆ, ಮಹಾಸ್ವಾಮಿ" ಎಂದು ಒಂದೇ ಸಮನಾಗಿ ಕಿರಿಚಿಕೊಂಡನು. ಅಂಗಲಾಚಿ ಬೇಡಿಕೊಂಡನು.

ರಾಜನು, "ಇದನ್ನೆಲ್ಲಾ ಬರೆದುಕೊಂಡಿರಾ?" ಎಂದು ಪಂಚಾಯತರನ್ನು ಕೇಳಲು, ಅವರೆಲ್ಲರೂ ಒಂದೇ ಸಮನಾಗಿ "ಹುಂ" ಎಂದರು. "ಸರಿ! ಆಮೇಲೆ?" ಎಂದು ರಾಜನು ಟೋಪಿಯವನನ್ನು ಕೇಳಿದನು. "ನನಗೆ ಏನೂ ತಿಳಿಯದು, ಬುದ್ಧಿ!" ಎಂದವನು ಉತ್ತರ ಕೊಟ್ಟನು. "ಇದನ್ನೂ ಬರೆಯಿರಿ! ಬಹಳ ಮುಖ್ಯವಾದ ರುಜುವಾತು" ಎಂದು ಹೇಳುತ್ತಾ ರಾಜನು ಅದನ್ನೂ ಬರೆಯಿಸಿದನು.

ಆಗ, ಅಲ್ಲಿದ್ದ ಒಂದು ಹಂದಿಮರಿ—ಬಲು ತುಂಟ—ಕೊಂಚ ನಕ್ಕಿತು. ವಿಚಾರಣೆಯಲ್ಲಿನ ವಿದ್ಯಮಾನಗಳನ್ನು ನೋಡುತ್ತಿದ್ದರೆ, ಕೇಳುತ್ತಿದ್ದರೆ ಎಂಥಾವರಿಗೂ ನಗುಬರುತ್ತದೆ, ಅನ್ನಿ. ಆದರೂ ರಾಜನ ಆಸ್ಥಾನದಲ್ಲಿ ನಕ್ಕರೆ ಶಿಕ್ಷೆ ಅನುಭವಿಸಬೇಕಾಗುತ್ತದೆ. ಸ್ಥಳವರಿತು ಸಮಯವರಿತು ನಗಬೇಕು. ರಾಣಿಯವರು, "ತದುಕು" ಎಂದು ಆರ್ಭಟಿಸಿದರು. ತಕ್ಷಣ ಇಬ್ಬರು ಭಟರು ಬಂದು ಆ ಹಂದಿಮರಿಯನ್ನು ತದುಕಿದರು. (ಅಂದರೆ, ಅದನ್ನು ಬಾಲಹಿಡಿದೆತ್ತಿ, ಒಂದು ಚೀಲದೊಳಗಿಟ್ಟು, ಚೀಲದ ಬಾಯನ್ನು ಕಟ್ಟಿ, ಅದನ್ನು ನೆಲದ ಮೇಲಿರಿಸಿ, ಇಬ್ಬರು ಭಟರು ಅದರ ಮೇಲೆ ಕೊಂಚ ಹೊತ್ತು ಆರಾಮವಾಗಿ ಕುಳಿತುಕೊಳ್ಳುವರು. ಅನಂತರ, "ಗೋವಿಂದ!" ಎಂದು ಹೇಳುತ್ತಾ ಎದ್ದು ಸ್ವಸ್ಥಾನಕ್ಕೆ ಹೋಗಿ ನಿಲ್ಲುವರು. ತದುಕುವುದೆಂದರೆ ಇದೇ!)

ಕಡೆಗೆ ರಾಜನು ಟೋಪಿಯವನಿಗೆ "ಹೋಗಿ ಬಾ" ಎಂದು ಹೇಳಿದನು. ರಾಜನು ಹೇಳಿದಹಾಗೆಯೇ ಅವನು ಕೊಂಚ ದೂರ ಹೋಗಿ ಮತ್ತೆ ಬಂದನು. ಆಗ ಅಲ್ಲಿದ್ದ ಇನ್ನೊಂದು ಹಂದಿಮರಿ ನಕ್ಕಿತು. ಅದನ್ನೂ ತದುಕಿದರು!

"ನೀನು ಹೋಗಿ ತಿಂಡಿ ಮುಗಿಸು"ಎಂದು ಮೊಲ ವೆಂಕಟರಮಣಪ್ಪ ನನ್ನು ಆಸ್ಥಾನದಿಂದ ಹೊರಗೆ ಹೊರಡಿಸಿತು. "ಆಚೆ ಹೋದ ಕೂಡಲೆ ಅವನ ತಲೆಯನ್ನು ಕತ್ತರಿಸಿ!" ಎಂದು ರಾಣಿಯವರ ಅಪ್ಪಣೆಯಾಯಿತು. ಆದರೆ, ಸಿಪಾಯಿಗಳು ಕತ್ತಿಗಳನ್ನು ಮಸೆದು ಸಿದ್ಧವಾಗಿ ಏಳುವುದರೊಳಗೆ ಟೋಪಿಯ ಗೋಪುರ ದಿಗಂತದಾಚೆಗೆ ಹೋಗಿತ್ತು.

"ಎರಡನೆಯ ಸಾಕ್ಷಿ—ಮುನಿಯಮ್ಮಾ, ಮುನಿಯಮ್ಮಾ, ಮುನಿ ಯಮ್ಮಾ" ಎಂದು ಮೊಲ ಹಿಂದಿನ ಹಾಗೆ ಕೂಗಿತು.

ಈಗ ಬಂದದ್ದು,—ಅಮ್ಮಾವರ ಅಡಿಗೆಯವಳು. ಕೈಯಲ್ಲಿ ಸಾರಿನ ಪುಡಿಯ ಡಬ್ಬ! ಸೌಟು! ತಡೆಯಲಾರದ ಕೋಪ, ಕಿಡಿಕಿಡಿ. "ಅಯ್ಯಯ್ಯೋ! ಇವಳಿಗೆ ಇದ್ದಕ್ಕಿದ್ದ ಹಾಗೆ ಹುಚ್ಚು ಹಿಡಿದುಬಿಟ್ಟರೆ ಏನು ಗತಿ?" ಎಂದು ಪಾಪಚ್ಚಿ ಯೋಚಿಸಿದಳು. ಆದರೆ, ಯಾರಿಗೂ ಅದನ್ನು ಹೇಳಲಿಲ್ಲ.

"ನಿನಗೆ ತಿಳಿದದ್ದನ್ನು ಹೇಳು!" ಎಂದು ರಾಜನ ಆಜ್ಞೆಯಾಯಿತು. "ಹೇಳುವುದಿಲ್ಲ" ಎಂದು ಅಡಿಗೆಯವಳು ಹೆಂಡಕುಡಿದ ಹುಲಿಯಂತೆ ಉತ್ತರಕೊಟ್ಟಳು. ರಾಜನಿಗೆ ಗಾಬರಿಯಾಯಿತು. ಪಂಚಾಯತರೆಲ್ಲರೂ ನಡುಗಿದರು. ರಾಣಿಯೂ ಕೂಡ ಅಡಿಗೆಯವಳ ಮಾತನ್ನು ಕೇಳದೆ ಇದ್ದವಳ ಹಾಗೆ ನಟಿಸಿದಳು. "ಗುಮಾಸ್ತರೇ? ಏನಪ್ಪಾ ಮಾಡುವುದು?" ಎಂದು ರಾಜನು ಮೊಲದ ಕಿವಿಯಲ್ಲಿ ಊದಿದನು. "ಹೆದರಬೇಡಿ, ಮಹಾಸ್ವಾಮಿ! ಇನ್ನೇನಾದರೂ ಒಂದು ಪ್ರಶ್ನೆ ಕೇಳಿ, ಬೇಗ. ಹದಕ್ಕೆ ಬರುತ್ತಾಳೆ!" ಎಂದು ಮೊಲ ಸೂಚನೆಕೊಟ್ಟಿತು. ರಾಜನ ಕಾಲುಗಳು ನಡುಗುತ್ತಿದ್ದುವು. ಆದರೂ, ಮುಖದಲ್ಲಿ ಆ ಭಯವನ್ನು ಎಳ್ಳಷ್ಟೂ ತೋರ್ಪಡಿಸದೆ ಅವನು, "ಬೋಂಡ ಮಾಡುವುದಕ್ಕೆ ಏನೇನು ಸಾಮಾನು ಬೇಕು, ತಾಯಿ, ಮುನಿಯಮ್ಮನವರೇ?" ಎಂದು ಕೇಳಿದನು.

ಅಡಿಗೆಯುವಳ 'ಕಿಡಿ ಕಿಡಿ' ಕೊಂಚ ಕಡಮೆಯಾಯಿತು. ಮುಖದಲ್ಲಿ ಮಂದಹಾಸದ ಛಾಯೆ ಸುಳಿದಾಡಿತು. "ಮುಖ್ಯವಾಗಿ ಮೆಣಸಿನ ಕಾಯಿ" ಎಂದಳು. ಆಗ ಅಲ್ಲೇ ಎಮ್ಮೆಕರುವಿನ ಮೇಲೆ ಕುಳಿತಿದ್ದ ಅಳಿಲು, "ಕೊಂಚ ಕರುಬೇವಿನಸೊಪ್ಪು ಬೇಕು" ಎಂದಿತು. ರಾಣಿಗೆ ಈ ಮಾತು ಕೇಳಿಸಿತು. ಹಿಂದಿನ ದಿನ ಜವಾನ ತಂದುಕೊಟ್ಟ ಬೇವಿನ ಸೊಪ್ಪಿನ ಕಹಿ ಅವಳ ಜ್ಞಾಪಕಕ್ಕೆ ಬಂತು. ಮೈಯೆಲ್ಲಾ ಪರಚಿಕೊಳ್ಳುವಷ್ಟು ಕೋಪ ಬಂತು. "ಹಿಡಿ ಅದನ್ನ ! ಕತ್ತರಿಸು ಅದರ ತಲೆಯನ್ನ ! ಸುಡು ಅದರ ಹಾಳು ಮೀಸೆಯನ್ನ ! ತದುಕು !" ಎಂದು ರೇಗಿ ಕೂಗಾಡಿದಳು. ಎಲ್ಲರೂ ಅಳಿಲನ್ನು ಹಿಡಿಯಲು ಓಡಿದರು. ಆದರೆ, ದೇವರ ದಯೆಯಿಂದ ಎಮ್ಮೆಕರು ಆಗ ನಿದ್ರಿಸುತ್ತಿರಲಿಲ್ಲ. ಆದ್ದರಿಂದ, ಗಲಾಟೆಯ ನಡುವೆ, ಅದು ಓಡಿಹೋಯಿತು. ಅಳಿಲನ್ನು ತದುಕುವ ಆರ್ಭಟದಲ್ಲಿ ಅಡಿಗೆ ಯುವಳೂ ಪರಾರಿ !

ಮುಂದಿನ ಸಾಕ್ಷಿ ಯಾರೆಂದು ತಿಳಿಯಲು ಪಾಪಚ್ಚಿಗೆ ತುಂಬಾ ಉತ್ಸಾಹ. ಏಕೆಂದರೆ, ಕಳವಿನ ಸುಳಿವು ಇನ್ನೂ ಹೊರಬಿದ್ದಿರಲಿಲ್ಲ. ತಮ್ಮ ದೇಶದ ಪ್ರಧಾನ ಮಂತ್ರಿಯ ಮೇಲೆ ಇಷ್ಟು ದೊಡ್ಡ ಅಪರಾಧ ವನ್ನು ಹೊರಿಸಿ, ಅದನ್ನು ನಿಜವೆಂದು ಸಾಧಿಸಬಲ್ಲ ಎದೆಕೆಚ್ಚಿನವನಾರೆಂದು ಅವಳು ಇದಿರುನೋಡಿದಳು.

ಮೊಲವು ಮತ್ತೆ ಬಾದಾಮಿಕಾಗದದ ಸುರುಳಿಯನ್ನು ಬಿಚ್ಚಿ ಹಿಡಿದು ರಾಜನ ಕನ್ನಡಕವನ್ನು ತನ್ನ ಮೂಗಿನ ಮೇಲೇರಿಸಿ, ಕೊಂಚ ಹೊತ್ತು ತಡವರಿಸಿ, "ಮೂರನೆಯ ಸಾಕ್ಷಿ—ಸಾರ್ವತ್ರಮ್ಮ—ಉರುಫ್, ಪಾಪಚ್ಚಿ" ಎಂದು ಕೂಗಿತು.

---

## "ಲೇ! ರಾಕ್ಷಸಿ!"

"ಇಲ್ಲಿದೇನೆ" ಎಂದು ಹೇಳಿಕೊಂಡು ಪಾಪಚ್ಚಿ ಮುಂದಕ್ಕೆ ಬಂದು ಸಾಕ್ಷಿಗಳು ನಿಲ್ಲಬೇಕಾದ ಜಾಗದಲ್ಲಿ ನಿಂತಳು. ಅಣಬೆಯ ಒಂದು ಸಣ್ಣ ಚೂರು ಉಳಿದಿದ್ದುದನ್ನು ಅವಳು ಮುಂದಕ್ಕೆ ಹೆಜ್ಜೆ ಇಟ್ಟಾಗಲೇ

ತಿಂದದ್ದರಿಂದ ಅಲ್ಲಿ ನೆರೆದಿದ್ದ ಎಲ್ಲರಿಗಿಂತಲೂ ಅವಳು ಎತ್ತರವಾಗಿದ್ದಳು. ಒಳ್ಳೆಯದೇ ಆಯಿತು. ಏಕೆಂದರೆ, ಯಾರು ಏನು ಹೆದರಿಸಿದರೂ ಅವಳು ಹೆದರುವಹಾಗಿರಲಿಲ್ಲ. ತಾನು ಹೇಳಬೇಕಾದ್ದನ್ನು ಅಂಜಿಕೆಯಿಲ್ಲದೆ ನ್ಯಾಯಾಸ್ಥಾನದ ಮುಂದಿಡಲು ಅವಳಿಗೆ ಸುಲಭವಾಯಿತು.

ಆದರೆ, ಮೊಟ್ಟಮೊದಲು ಒಂದು ಸಣ್ಣ ಅನಾಹುತ ನಡೆಯಿತು. ಅವಳು ಮುಂದೆ ಹೋದ ರಭಸದಲ್ಲಿ ಅವಳ ಲಂಗದ ಅಂಚು ತಗುಲಿ ಪಂಚಾಯುತರೆಲ್ಲರೂ ನೆಲಕ್ಕೆ ಬಿದ್ದರು. ಬಳಪವನ್ನು ಕಳೆದುಕೊಂಡು ಬೆರಳಿನಿಂದ ಬರೆಯುತ್ತಿದ್ದ ಸಣ್ಣಪ್ಪನಿಗೆ ಎಲ್ಲರಿಗಿಂತ ಹೆಚ್ಚು ಪೆಟ್ಟಾಯಿತು. "ಎಲ್ಲರನ್ನೂ ಅವರವರ ಸ್ಥಾನದಲ್ಲಿ ಕೂಡಿಸಿದ ಮೇಲೆ ಮುಂದಿನ ಮಾತು" ಎಂದು ರಾಜನು ಹೇಳಿದನು. ದೇವರ ದಯೆಯಿಂದ ರಾಣಿಗೆ ಕೋಪ ಬರಲಿಲ್ಲ; ಅವಳು ನಗುತ್ತಿದ್ದಳು. ಪಾಪಚ್ಚಿ ಎಲ್ಲರನ್ನೂ ಎತ್ತಿ ಅವರವರ ಕುರ್ಚಿಮೇಲೆ ಕೂಡಿಸಿ ಕೈಗೆ ಸ್ಲೇಟನ್ನೂ ಬಳಪವನ್ನೂ ಕೊಟ್ಟಳು. ಸಣ್ಣಪ್ಪನನ್ನು ಮಾತ್ರ ತಿಳಿಯದೆ ಬೆನ್ನಮೇಲೆ ಮಲಗಿಸಿಬಿಟ್ಟಿದ್ದಳು. ಆದರ ಒದ್ದಾಟ ನೋಡಲಾರದೆ ಗುಮಾಸ್ತೆ ಹೋಗಿ ಸರಿಪಡಿಸಿದನು. ರಾಣಿ ಮತ್ತೆ ಮುಖವನ್ನು ಕೆಂಪಗೆಮಾಡಿಕೊಂಡು ಕುಳಿತಳು.

"ಬೋಂಡ ಕದ್ದ ವಿಷಯವಾಗಿ ನಿನಗೆ ಏನು ಗೊತ್ತಿದೆ, ಹೇಳು" ಎಂದು ರಾಜನು ಪಾಪಚ್ಚಿಯನ್ನು ಕೇಳಿದನು. "ಏನೂ ಗೊತ್ತಿಲ್ಲ, ಸಾರ್!" ಎಂದು ಪಾಪಚ್ಚಿ ಬಹಳ ತಾಳ್ಮೆಯಿಂದ ಉತ್ತರಕೊಟ್ಟಳು. "ಒಂದು ತೃಣವೂ?" ಎಂದು ರಾಜನು ಮತ್ತೆ ಒತ್ತಿಕೇಳಿದನು. "ಒಂದು ತೃಣವೂ ಗೊತ್ತಿಲ್ಲ" ಎಂದು ಪಾಪಚ್ಚಿ ಒತ್ತಿಹೇಳಿದಳು.

"ಹಾಗಾದರೆ, ಈ ಹುಡುಗಿ ಈ ವಿಚಾರಣೆಗೆ ಬಹಳ ಪ್ರಧಾನವಾದ ಸಾಕ್ಷಿ" ಎಂದು ರಾಜನು ಪಂಚಾಯುತರ ಕಡೆ ತಿರುಗಿ ಹೇಳಿದನು. ಅವರೆಲ್ಲರೂ ಕೂಡಲೇ ತಲೆಬಗ್ಗಿಸಿಕೊಂಡು ಬಿರುಬಿರನೆ ಬರೆಯತೊಡಗಿದರು. ಬಿಳಿಯ ಮೊಲವು ರಾಜನ ಹತ್ತಿರ ಸರಿದು, "ಮಹಾಸ್ವಾಮಿ ಈಗ ಅಪ್ಪಣೆ ಕೊಡಿಸಿದ್ದು 'ಪ್ರಧಾನವಾದ ಸಾಕ್ಷಿ' ಅಂತಲೋ, ಅಥವಾ, 'ಅಪ್ರಧಾನ ವಾದ ಸಾಕ್ಷಿ' ಅಂತಲೋ?" ಎಂದು ಕೇಳಿತು. "ಹೌದು. ಅಪ್ರಧಾನ. ಅಲ್ಲ. ಪ್ರಧಾನ....ಹೌದು" ಎಂದು ರಾಜನು ಆಕಳಿಸುತ್ತಾ ಉತ್ತರ

ಕೊಟ್ಟನು. ರಾಜನಿಗೆ ಆಗಲೇ ಹಸಿವು, ಬೇಸರಿಕೆ, ನಿದ್ದೆ. ಕೆಲವು ಪಂಚಾಯತರು 'ಪ್ರಧಾನ' ಎಂದೂ, ಕೆಲವರು 'ಅಪ್ರಧಾನ' ಎಂದೂ, ಇನ್ನೂ ಕೆಲವರು 'ಹೌದು—ಅಲ್ಲ' ಎಂದೂ ಬರೆದುಕೊಂಡರು.

ಆಗ ರಾಜನು ವಿಚಾರಣೆಯನ್ನು ಮುಗಿಸಲು ಒಂದು ಉಪಾಯವನ್ನು ಕಂಡುಹಿಡಿದನು. ಹೇಗಾದರೂ ಮಾಡಿ ಪಾಪಚ್ಚಿಯನ್ನು ಕಳುಹಿಸಿಬಿಟ್ಟರೆ ವಿಚಾರಣೆ ಬೇಗ ಮುಗಿಯುವುದೆಂದು ಅವನ ಊಹೆ. ತನ್ನ ಮೇಜಿನ ಮೇಲಿಂದ ಅವನು ಒಂದು ಹಳೆಯ ಓಲೆಗರಿ ಗ್ರಂಥವನ್ನು ತೆಗೆದು, ಎದ್ದುನಿಂತು, "ಎಲ್ಲರೂ ಕೇಳಿ! ನಮ್ಮ ದೇಶದ ಕಾನೂನ್ ೪೩೩ನೆಯ ಸೆಕ್ಷನ್ ಪ್ರಕಾರ ಮೂರು ಮೊಳಕ್ಕಿಂತ ಎತ್ತರವಿರುವವರು ಯಾರೂ ನ್ಯಾಯಾಸ್ಥಾನದಲ್ಲಿರಬಾರದು. ಆದ್ದರಿಂದ, ಅಂಥವರೆಲ್ಲರೂ ಈಗಲೇ ಹೊರಡತಕ್ಕದ್ದು" ಎಂದು ಕೂಗಿಹೇಳಿದನು.

ಸರ್ವರೂ ಪಾಪಚ್ಚಿಯ ಕಡೆ ದುರುದುರನೆ ನೋಡಿದರು. ಆದರೆ, ಪಾಪಚ್ಚಿ, "ನಾನು ಮೂರು ಮೊಳ ಇಲ್ಲ" ಎಂದಳು. ರಾಜನು "ಇದೀಯೆ" ಎಂದು ಗಟ್ಟಿಯಾಗಿ ಕೂಗಿದನು. ರಾಣಿ, "ಮೂರಲ್ಲ; ಮೂವತ್ತು ಮೊಳ!" ಎಂದಳು. "ಇದ್ದರೆ ಇರಲಿ! ನಾನಿಲ್ಲಿಂದ ಹೊರಡುವುದಿಲ್ಲ. ನೀವೇನು ಮಾಡುತ್ತೀರಿ, ನೋಡುತ್ತೇನೆ....ಅದೂ ಅಲ್ಲದೆ, ಈಗ ನೀವು ಓದಿದ್ದು ನನಗೋಸ್ಕರ ಈಗ ಬರೆದು ಆ ಗ್ರಂಥಕ್ಕೆ ಸೇರಿಸಿದ ಸೆಕ್ಷನ್. ಕ್ಷಣಕ್ಷಣಕ್ಕೂ ಹೀಗೆ ಕಾನೂನನ್ನು ಬದಲಾಯಿಸುವುದು, ಬೇಕುಬೇಕಾದಾಗ ಹೊಸದನ್ನು ಸೇರಿಸುವುದು, ಇದು ಯಾವ ಸೀಮೆಯ ನ್ಯಾಯ?" ಎಂದು ಪಾಪಚ್ಚಿ ಪ್ರತಿಭಟಿಸಿದಳು. "ಅಲ್ಲ, ಅಲ್ಲ, ಎಂದಿಗೂ ಅಲ್ಲ. ಇದು ಈ ದೇಶದ ಸನಾತನ ಧರ್ಮದ ಮೊದಲನೆಯ ಸೂತ್ರ" ಎಂದು ರಾಜನು ವಾದಿಸಿದನು. "ಹಾಗಾದರೆ, ಅದು ಒಂದನೆಯ ಸೆಕ್ಷನ್ನಾಗಿರಬೇಕಾಗಿತ್ತು. ೪೩೩ನೆಯದು ಹೇಗಾಯಿತು? ನೀವು ಹೇಳುವುದು ಶುದ್ಧ ಸುಳ್ಳು!" ಎಂದು ಪಾಪಚ್ಚಿ ಎದುರುಬಿದ್ದಳು. ಜಾಣೆ ಹುಡುಗಿ. ರಾಜನ ಮುಖ ಚಿಕ್ಕದಾಯಿತು. ಗ್ರಂಥವನ್ನು ಮುಚ್ಚಿ ಒಂದು ಮೂಲೆಗೆಸೆದನು. ಏನುಮಾಡುವುದೆಂದು ತೋಚದೆ ತಲೆತಗ್ಗಿಸಿಕೊಂಡು ಸಿಂಹಾಸನದಲ್ಲಿ ಕುಳಿತನು.

ಆಗ ಗುಮಾಸ್ತೆಯಾದ ಮೊಲವು "ಮಹಾಸ್ವಾಮಿ! ಇದನ್ನು ಪರಾಂಬರಿಸಬೇಕು. ಈಗ ತಾನೇ ಪೋಲಿಸಿನವರು ಈ ಕಾಗದವನ್ನು ನನ್ನ ಕೈಗೆ ಕೊಟ್ಟರು. ಇದರಲ್ಲಿ ಬಹಳ ಮುಖ್ಯವಾದ ವಿಷಯಗಳಿರಬಹುದೆಂದು ಅವರು ಊಹಿಸುತ್ತಾರೆ" ಎಂದು ಹೇಳಿತು. ಅರೆನಿದ್ದೆಯಲ್ಲಿದ್ದ ರಾಣಿ ಈಗ ಕಣ್ತೆರೆದಳು. "ಅದರಲ್ಲೇನಿದೆ, ಓದಿದೆಯಾ?" ಎಂದು ಬಹಳ ಆತುರದಿಂದ ಕೇಳಿದಳು. ಮಂತ್ರಿಯ ತಲೆಯನ್ನು ಕತ್ತರಿಸಬೇಕೆಂದು ರಾಜನಿಗಿಂತ ರಾಣಿಗೆ ಹೆಚ್ಚು ಅಭಿಲಾಷೆಯಿದ್ದಂತೆ ಪಾಪಚ್ಚಿಗೆ ತೋರಿತು. ಮೊಲವು, "ನಾನಿನ್ನೂ ಇದನ್ನು ಒಡೆದು ನೋಡಲಿಲ್ಲ. ಪ್ರಾಯಶಃ ಅಪರಾಧಿ ತನ್ನ ಗುಂಪಿನವರಿಗೆ ಬರೆದ ಕಾಗದವಾಗಿರಬಹುದು" ಎಂದು ಹೇಳಿತು.

"ಇರಲೇಬೇಕು. ಇರಲೇಬೇಕು. ಕಾಗದ ಬರೆದ ಮೇಲೆ ಅದು ಯಾರಾದರೊಬ್ಬರಿಗೆ ಬರೆದದ್ದಾಗಿಯೇ ಇರಬೇಕು. ಸುಮ್ಮನೆ ಬರಿಯ ಕಾಗದವಾಗಿರಲಾರದು" ಎಂದು ರಾಜನು ಹೇಳಿದನು. ರಾಜನ ಬುದ್ಧಿಯ ಚುರುಕನ್ನು ನೋಡಿ ಎಲ್ಲರೂ ಮಂಕಾದರು. "ವಿಳಾಸ ಯಾರದು?" ಎಂದು ಒಬ್ಬ ಪಂಚಾಯತನು ವಿಚಾರಿಸಿದನು. "ಅದು ಕೂಡ ಬಹಳ ಅನುಮಾನಕ್ಕೆ ಆಸ್ಪದಕೊಡುತ್ತೆ. ಪರಮಾಶ್ಚರ್ಯ. ಇಂತಹ ಕಾಗದಗಳನ್ನು ನಾನು ನೋಡುವುದು ಇದೇ ಮೊದಲು! ವಿಳಾಸವೇ ಇಲ್ಲ" ಎಂದು ಮೊಲವು ತಿಳಿಸಿತು. "ಕಳ್ಳ! ಶುದ್ಧ ಕಳ್ಳ! ವಿಳಾಸವೇ ಬರೆದಿಲ್ಲ" ಎಂದು ರಾಣಿ ಚೀರಿದಳು.

ಮೊಲವು ಕಾಗದವನ್ನು ಒಡೆದು ನೋಡುತ್ತಾ, "ಕ್ಷಮಿಸಬೇಕು, ಮಹಾಸ್ವಾಮಿ. ಇಂಥಾ ಮೋಸ ಎಲ್ಲಾದರೂ ಉಂಟೆ. ಇದೊಂದು ಕಾಗದವೇ ಅಲ್ಲ, ಮಹಾಸ್ವಾಮಿ! ಬರಿಯ ಶ್ಲೋಕಗಳು, ಮಹಾಸ್ವಾಮಿ—ಕವಿತೆ, ಬುದ್ಧಿ!" ಎಂದು ಹೇಳಿತು. "ಕಳ್ಳ! ಶುದ್ಧ ಕಳ್ಳ! ಕವಿತೆ ಬರೆಯುತ್ತಾನೆ!" ಎಂದು ರಾಣಿ ಚೀರಿದಳು.

ಪಂಚಾಯತರಲ್ಲೊಬ್ಬನಾದ ಸಣ್ಣಪ್ಪ "ಬಿಕಲಂ ಯಾರದು?" ಎಂದು ಕೇಳಿದ. "ನಿಜ! ಅದನ್ನು ಪರೀಕ್ಷಿಸಬೇಕು!....ಓ! ಬುದ್ಧಿ! ಮಂತ್ರಿಯ ಮೇಲೆ ಗುಮಾನಿ ಹೆಚ್ಚಾಗಲು ಇನ್ನೊಂದು ಕಾರಣ ಸಿಕ್ಕಿತು,

ಬುದ್ಧಿ! ಇದನ್ನು ಬರೆದಿರುವುದು ಮಂತ್ರಿಯೇ ಅಲ್ಲ, ಬುದ್ಧಿ!'' "ಹುಂ. ತಾನೇ ಬರೆದರೆ ಗೊತ್ತಾಗುತ್ತೆಂದು ಇನ್ನೊಬ್ಬನಿಂದ ಬರೆಸಿದ್ದಾನೆ. ಪಂಚಾಯತರೇ, ಇದನ್ನೂ ಗಮನಿಸದಲ್ಲಿಡಿ!'' ಎಂದು ರಾಜನು ಹೇಳಿದನು. ರಾಣಿ, "ಕಳ್ಳ! ಶುದ್ಧ ಕಳ್ಳ! ಹೇಡಿ!'' ಎಂದಳು.

ವಿಚಾರಣೆಯಲ್ಲಿ ಇದುವರೆಗೂ ಯಾವ ಭಾಗವನ್ನೂ ವಹಿಸದೆ ಇದ್ದ ಅಪರಾಧಿ ಈಗ ಬಾಯಿತೆರೆದನು. "ದೇವರಾಣೆ, ನಾನು ಕವಿತೆಯನ್ನು ಯಾವತ್ತೂ ಬರೆದಿಲ್ಲ. ಜಗದೀಶ್ವರನ ದಯೆಯಿಂದ ಕವಿತೆ ಬರೆಯದೆ ಕಣ್ಮುಚ್ಚಬೇಕೆಂಬುದೇ ನನ್ನ ಹಾರೈಕೆ. ಅಲ್ಲಿರುವ ಶ್ಲೋಕಗಳು ನನ್ನ ದೆಂದು ನೀವು ಹೇಗೆ ಸಾಧಿಸುತ್ತೀರಿ, ನೋಡುತ್ತೇನೆ. ನಾನು ಬರೆದದ್ದಾದರೆ ಕೊನೆಯಲ್ಲಿ ನನ್ನ ರುಜು ಇರಬೇಕಲ್ಲವೇ? ರುಜು ಇದೆಯೇ, ನೋಡಿ!'' ಎಂದು ಮಂತ್ರಿ ಹೇಳಿದನು. ಕವಿತೆಯೆಂದರೆ ಅವನಿಗೇಕೆ ಇಷ್ಟು ಕೋಪ ಎಂದು ಪಾಪಚ್ಚಿ ಆಶ್ಚರ್ಯಪಟ್ಟಳು. ರಾಜನು, "ರುಜು ಇಲ್ಲ. ಆದ್ದರಿಂದಲೇ ನಿನ್ನ ಮೇಲೆ ಅನುಮಾನ ಹೆಚ್ಚುತ್ತಿದೆ. ಬರೆದಾಗಲೇ ರುಜು ಹಾಕದೆ, ಈಗ ರುಜು ಎಲ್ಲಿ—ಎಂದು ಬೇರೆ ಕೇಳುತ್ತೀಯೆ? ಹಾಕಬೇಕಾಗಿತ್ತು. ಹಾಕದಿರುವುದು ಇನ್ನೊಂದು ಅಪರಾಧ. ಪಂಚಾಯತರೇ, ಬರೆದುಕೊಳ್ಳಿ!'' ಎಂದು ಹೇಳಿದನು. ಎಲ್ಲರೂ ರಾಜನ ನ್ಯಾಯಕ್ಕೆ ಮೆಚ್ಚಿ ಚಪ್ಪಾಳೆ ತಟ್ಟಿದರು. ರಾಣಿ, "ಕಳ್ಳ! ಶುದ್ಧ ಕಳ್ಳ! ಬೋಂಡ ಕದ್ದವನು ಇವನೇ ಎಂದು ಸ್ಪಷ್ಟವಾಗಿದೆ. ಅವನ ತಲೆಯನ್ನು ....'' ಎಂದು ಹೇಳುವುದರೊಳಗೆ ಪಾಪಚ್ಚಿ, "ಒಂದು ಚೂರೂ ಸ್ಪಷ್ಟವಾಗಿಲ್ಲ. ನೀವೆಲ್ಲರೂ ಹುಚ್ಚರೆಂಬುದು ಮಾತ್ರ ಸ್ಪಷ್ಟವಾಗಿದೆ, ಅಷ್ಟೆ! ಆ ಶ್ಲೋಕಗಳನ್ನೇ ಇನ್ನೂ ಓದಿ ನೋಡಲಿಲ್ಲ. ಅಷ್ಟರೊಳಗೆ ತಲೆ ಕತ್ತರಿಸಬೇಕಂತೆ....ತಲೇ!'' ಎಂದು ಧೈರ್ಯವಾಗಿ ಹೇಳಿಬಿಟ್ಟಳು.... ಎಲ್ಲರೂ ಸ್ತಬ್ಧರಾದರು.

"ಓದು, ಕತ್ತೆ!'' ಎಂದು ರಾಜನ ಅಪ್ಪಣೆಯಾಯಿತು. ರಾಜನ ಕನ್ನಡಕವನ್ನು ಮೂಗಿನ ಮೇಲೇರಿಸಿ ಮೊಲವು, "ಎಲ್ಲಿಂದ ಪ್ರಾರಂಭಿಸಲಿ?'' ಎಂದು ಕೇಳಿತು. "ಮೊದಲನೆಯ ಶ್ಲೋಕದ ಮೊದಲನೆಯ ಪಂಕ್ತಿಯ ಮೊದಲನೆಯ ಅಕ್ಷರದಿಂದ ಪ್ರಾರಂಭಿಸಿ ಕೊನೆಯ ಪಂಕ್ತಿಯ ಕೊನೆಯ

ಅಕ್ಷರದತನಕ ಓದು. ಅನಂತರ ಬಾಯಿ ಮುಚ್ಚು!" ಎಂದು ರಾಜನು ಆಜ್ಞಾಪಿಸಿದನು.

ಮೊಲವು ಶ್ಲೋಕಗಳನ್ನು ಓದುತ್ತಿದ್ದಾಗಲೇ ಮಧ್ಯೆ ಮಧ್ಯೆ ರಾಜನು ಅವುಗಳಿಗೆ ಟೀಕೆಮಾಡುತ್ತಾ ಬಂದನು. ಪಂಚಾಯುತರು ಬಿರು ಬಿರನೆ ಬರೆದುಕೊಂಡರು. ಸ್ಲೇಟಿನ ಎರಡು ಭಾಗಗಳೂ ಬರೆದು ಮುಗಿದರೆ ಒಂದು ಕಡೆಯನ್ನು ಒರಸಿ ಮತ್ತೆ ಬರೆಯುತ್ತಿದ್ದರು.

ನೀನಿಂದಲ್ಲಿಗೆ ಹೋಗಿಹೆಯಂತೆ
ನನ್ನನ್ನವರಿಗೆ ಹಿಡಿಯಲು ಬರದು.
ನನ್ನೀ ಬಾಳನು ಹೊಗಳಿಹಳಂತೆ
ನನ್ನಿಯ ನುಡಿಯಿದು—ಈಜಲು ಬರದು.

(ರಾಜನು "ನಿನಗೆ ಈಜುವುದಕ್ಕೆ ಬರುತ್ತದೆಯೋ?" ಎಂದು ಮಂತ್ರಿಯನ್ನು ಕೇಳಿದನು. "ಬರುವುದಿಲ್ಲ, ಮಹಾಸ್ವಾಮಿ" ಎಂದು ಅವನು ಉತ್ತರ ಕೊಟ್ಟಾಗ, "ಪಂಚಾಯುತರೇ, ಬರೆದುಕೊಳ್ಳಿ! ಬಹಳ ಮುಖ್ಯವಾದ ಸಂಗತಿ" ಎಂದು ರಾಜನು ಅವರನ್ನು ಎಚ್ಚರಿಸಿದನು.)

ನಾನು ಹೋಗಲಿಲ್ಲವೆಂದು ಅವನಿಗೀಗ ತಿಳಿಸಿದೆ
ಇಂತಹವು ಒಳ್ಳಿತೆಂದು ನಾವುಗಳು ಕಂಡೆವು.

("ಓಹೋ! ಇಂಥಾ ಬೋಂಡಗಳು ಒಳ್ಳಿತೆಂದು ಕಂಡಸಂತೆ" ಎಂದು ರಾಜನು ಹೇಳಿದನು.)

ಅವಳೀ ಕಾರ್ಯದಿ ಹಠವನು ಹಿಡಿದರೆ
ನಮ್ಮಯ ಗತಿ ಏನಾಗುವುದು?

("ಇದು ರಾಣಿಯನ್ನು ಕುರಿತು ಬರೆದದ್ದು, ಖಂಡಿತ. ಪ್ರಿಯೆ! ಕೇಳಿದೆಯಾ?")

ನಾನವನಿಗೀಗೊಂದು, ಅವರೆರಡು ಕೊಟ್ಟರು
ಐದಾರು ಮತ್ತೊಂದು, ಇವರದನು ಮುಟ್ಟರು.

("ಇದು ಬೋಂಡದ ಹಂಚಿಕೆಯ ಒಳಸಂಚು.")

ನಿನ್ನೆ ಮನೆಗೆ ಹೋದವವು
ನನ್ನಲ್ಲಿಗೆ ಹಿಂದಿರುಗಿದುವು!

("ಹೌದು. ಬೋಂಡ ಇಲ್ಲೇ ಇವೆಯಲ್ಲಾ!")

ನೀನೇ ಎಂದು
ಇದ್ದೇ ನಾನು!
ಅವಳಿಗೆ
ಬೆನ್ನು ಫಣಿ!

("ಪ್ರಿಯೆ! ಕೇಳಿದೆಯಾ, ಈ ಮಂತ್ರಿ ಬರೆದಿರುವುದನ್ನ. ನಿನಗೆ ಬೆನ್ನು ಫಣಿಯಂತೆ!")

ಉರಿಯುವ ಬೆಂಕಿಗೆ ಪೆಟ್ರೋಲನ್ನು ಹಾಕಿದ ಹಾಗಾಯಿತು. ಭದ್ರಕಾಳಿಯಂತೆ ರಾಣಿ ಚೀರಿದಳು. ಅಲ್ಲಿದ್ದ ಒಂದು ಶಾಯಿಕುಡಿಕೆಯನ್ನು ತೆಗೆದು ಪಂಚಾಯತರಿದ್ದೆಡೆಗೆ ಎಸೆದಳು. ಅದು ಸಣ್ಣಪ್ಪನ ತಲೆಯ ಮೇಲೆ ಬಿತ್ತು. ಅದರ ಬುರುಡೆ ಅಪ್ಪಚ್ಚಿಯಾಗಿಹೋಯಿತು. ಆದರೂ, ಪಾಪ, ಜಜ್ಜಿ ಹೋದ ನಾಲಗೆಯಿಂದ ಮಸಿಯನ್ನು ನೆಕ್ಕುತ್ತಿತ್ತು.

ಪಾಪಚ್ಚಿಗೆ ಇದೇನನ್ಯಾಯ ಎನಿಸಿತು. ಯಾರೋ ಬರೆದ ಶ್ಲೋಕಗಳು! ಯಾರ ಮೇಲೋ ಕೋಪ! ಯಾರಿಗೋ ಶಿಕ್ಷೆ! ಅವಳಿಗೆ ಸಹಿಸಲಿಲ್ಲ. "ಲೇ! ರಾಕ್ಷಸಿ!" ಎಂದು ರಾಣಿಯನ್ನು ಬೈದಳು. ರಾಣಿಗೆ ಮತ್ತಷ್ಟು ಕೋಪ ಬಂತು. "ಮುಚ್ಚು ಬಾಯಿ!" ಎಂದು ಕೂಗಿರೇಗಿದಳು. "ಮುಚ್ಚುವುದಿಲ್ಲ, ಮಾರಿ!" ಎಂದು ಪಾಪಚ್ಚಿಯೂ ಕೂಗಿದಳು.

ಏಕೋ ವಿಪರೀತಕ್ಕಿಟ್ಟುಕೊಂಡಿತು. ಆದದ್ದಾಗಲಿ, ಎಂದು ಪಾಪಚ್ಚಿ "ಲೇ ಇಸ್ಪೀಟ್ರಾಣಿ! ರಾಕ್ಷಸಿ!" ಎಂದು ಗಹಗಹಿಸಿ ನಕ್ಕಳು.

ಆಗ ಸುತ್ತ ನಿಂತಿದ್ದ ಭಟರೆಲ್ಲರೂ ರಟ್ಟಿನ ಆಳುಗಳಂತಿದ್ದ ಸಿಪಾಯಿಗಳೆಲ್ಲರೂ, ಐದು, ಎರಡು, ಒಂಬತ್ತು, ಎಂಟು ಮುಂತಾದ ಜವಾನ

ರೆಲ್ಲರೂ ಒಟ್ಟಿಗೆ ನೆಲದಿಂದ ನೆಗೆದು ಆಕಾಶಕ್ಕೆ ಹಾರಿ ಗಾಳಿಯಲ್ಲಿ ತೂರಾಡಿ ಅವಳ ಮೈಮೇಲೆ ಬಿದ್ದರು !!

ಪಾಪಚ್ಚಿಗೆ ತುಂಬಾ ಕೋಪ! ಭಯ!....ಅವಳು ಕಿರಿಚಿದಳು. ಅವರನ್ನು ಓಡಿಸಲು, "ಅಯ್ಯೋ!" ಎಂದು ಕೈ ಬೀಸಿದಳು.

* * *

ಆಗ ಅವಳ ಅಕ್ಕ "ಏಕೆ? ಪಾಪಚ್ಚಿ! ಕನಸು ಕಂಡೆಯೇನೆ? ಮರದ ಮೇಲಿಂದ ತರಗೆಲೆ ಬಿದ್ದರೆ ಯಾಕೆ ಹೀಗೆ ಕಿರಿಚಿಕೊಂಡೆ?" ಎಂದು ಕೇಳಿದಳು. ಅಷ್ಟು ಹೊತ್ತಿಗೆ ಸರಿಯಾಗಿ ಶಾಮು ಓಡಿಬಂದು, "ಪಾಪಚ್ಚಿ! ಪಾಪಚ್ಚಿ! ಬಾ, ಇಲ್ಲಿ! ನಿನಗೆ ಅಣ್ಣ ಅಂಗಡಿಯಿಂದ ಹಾಲು ಖೋವ ತಂದಿದಾನೆ" ಎಂದು ಹೇಳಿದ.

ಪಾಪಚ್ಚಿ ಮನೆಯೊಳಕ್ಕೆ ಓಡಿಹೋದಳು. ಅವಳನ್ನು ನೋಡಿ ಪಿಲ್ಲಿ ಎದುರಿಗೆ ಕುಣಿಯುತ್ತಾ ಬರುತ್ತಿತ್ತು.



1867-34.— ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ ಟಿ. ಸುಬ್ರಹ್ಮಣ್ಯ ಅಯ್ಯರವರಿಂದ ಮುದ್ರಿಸಲ್ಪಟ್ಟಿತು.




# ಪ್ರಕಟನೆಗಳು

**ಸಾಹಿತ್ಯ ಪ್ರಚಾರ** (ಒಂದು ಭಾಷಣ)

—ಕೆ. ವಿ. ಪುಟ್ಟಪ್ಪ, ಎಂ.ಎ. (ಪ್ರತಿಗಳು ಮುಗಿದಿವೆ) .. ೦—೨—೦

**ಕನ್ನಡ ಮೇಘಸಂದೇಶ**

—ಪಂಡಿತ ಕುಕ್ಕೆ ಸುಬ್ರಹ್ಮಣ್ಯಶಾಸ್ತ್ರಿ. ಕ್ರೌ ಅ. ೪೮ .. ೦—೬—೦

ಕಾಳಿದಾಸನ ಸುಪ್ರಸಿದ್ಧ ಸಂಸ್ಕೃತಕಾವ್ಯದ ಕನ್ನಡ ಅನುವಾದವಿದು. ಯಕ್ಷನೊಬ್ಬನು ಅಧಿಕಾರಮದದಿಂದ ಧನಪತಿಯ ಶಾಪಕ್ಕೆ ಗುರಿಯಾಗಿ ತನ್ನಿನಿಯಳನ್ನಗಲಿ ಯಕ್ಷರ ವಸತಿಯಾದ ಅಲಕಾಪುರಿಯನ್ನುಳಿದು ವಿಂಧ್ಯಪರ್ವತಗಳ ಮಧ್ಯೆ ರಾಮಗಿರ್ಯಾಶ್ರಮವನ್ನು ಸೇರುವನು. ವಿರಹತಪ್ತನಾದ ಯಕ್ಷನು ತನ್ನ ಕಾಂತೆಗೆ ಸಂತೈಸುವ ಸಂದೇಶವನ್ನು ಕಳುಹಿಸಲು ದೂತನಾರನ್ನೂ ಕಾಣದೆ ಮಳೆಗಾಲದಾಸಮಯದಲ್ಲಿ ಮೋಡವೊಂದನ್ನು ಕಾಣಲು ಅದನ್ನೇ ಶರಣು ಹೋಗುವನು. ಇದೇ ಕಾವ್ಯದ ವಸ್ತು. ಈ ಕಿಂಚಿದ್ವಸ್ತುವನ್ನು ತೆಗೆದುಕೊಂಡು ಕಾಳಿದಾಸನು ತನ್ನ ಅಸದೃಶ ಪ್ರತಿಭೆಯಿಂದ ಅತ್ಯಂತ ವಿಲಾಸಯುತವೂ ಮನೋಹರವೂ ಆದ ಕಾವ್ಯವನ್ನು ಮೇಘಸಂದೇಶದಲ್ಲಿ ರಚಿಸಿರುವನು. ಈ ಕಾವ್ಯದಲ್ಲಿ ಎರಡು ಭಾಗಗಳಿವೆ. ಮೋಡವು ಅಲಕಾಪುರಿಯನ್ನು ಸೇರಲು ಯಾವ ದಾರಿಯನ್ನು ಹಿಡಿದು ನಡೆಯಬೇಕೆಂಬುದನ್ನು ಯಕ್ಷನು ಪೂರ್ವಮೇಘದಲ್ಲಿ ವರ್ಣಿಸುವನು. ಅನೇಕ ರಮ್ಯಸ್ಥಾನಗಳ, ಪುಣ್ಯಕ್ಷೇತ್ರಗಳ, ಪ್ರಸಿದ್ಧ ನಗರಗಳ ಮನೋಹರವಾದ ವರ್ಣನೆಯು ಇದರಲ್ಲಿ ಅಡಕವಾಗಿದೆ. ಅಲಕಾಪುರಿ, ಅಲ್ಲಿ ಯಕ್ಷನ ಸೌಧ, ಯಕ್ಷನ ಕಾಂತೆಯನ್ನಲ್ಲಿ ಕಾಣುವ ಬಗೆ, ಅವಳಿಗೆ ಸಂದೇಶವನ್ನರುಹಬೇಕಾದ ರೀತಿ—ಇವು ಉತ್ತರಮೇಘದ ವಿಷಯಗಳು.

ಕನ್ನಡದಲ್ಲಿ ಈ ಉತ್ತಮ ಕಾವ್ಯದ ಸರಳವೂ ಸುಂದರವೂ ಮನೋಹರವೂ ಆದ ಭಾಷಾಂತರವು ಇದೇ ಮೊದಲನೆಯದು.

ಅಭಿಪ್ರಾಯಗಳು—

ಕಾಳಿದಾಸನ ಸುಪ್ರಸಿದ್ಧ ಸಂಸ್ಕೃತ ಕಾವ್ಯದ ಕನ್ನಡ ಅನುವಾದ. . . . ಅನುವಾದವು ಕುಸುಮಷಟ್ಪದಿಯಲ್ಲಿದೆ; ಅಚ್ಚಕನ್ನಡದ ಹಾಡುವೃತ್ತ, ಮುತ್ತಿನಂಥ ಮಾತುಗಳು, ಆ ಮಾತುಗಳ ಹೊಂದಿಕೆಯಾದ ಜೋಡಣೆ—ಇವುಗಳಿಂದ ಕಾವ್ಯಕ್ಕೆ ಪ್ರಾಯಿಕವಾಗಿ ಒಂದು ಹೊಸ ಮೃದುತ್ವವೂ ಮಾಧುರ್ಯವೂ ಬಂದಿವೆ.

—"ಪ್ರಬುದ್ಧ ಕರ್ಣಾಟಕ."

---

**ಕರ್ಣಾಟಕ ಸಂಘ ಶಿವಮೊಗ್ಗ**

ಸರಲತೆ, ಮಾಧುರ್ಯ, ವಿಶದತೆ—ಈ ಗುಣಗಳಿಂದ ಕಾವ್ಯವು ಮನೋಹರವಾಗಿದೆ.

—ಶ್ರೀಯುತ ಡಿ. ವಿ. ಗುಂಡಪ್ಪನವರು.

**ಗಂಡುಗೊಡಲಿ** (ಏಕಾಂಕ ದೃಶ್ಯ)

—ಜಿ. ಪಿ. ರಾಜರತ್ನಂ, ಎಂ.ಎ. ಕ್ರೌ ಅ. ೩೨ .. ೦—೪—೦

ಕೃತಯುಗದಲ್ಲಿ ಕ್ಷಾತ್ರಕುಲಜಲಧಿಯನ್ನು ಆಪೋಶನವನ್ನಾಗಿ ತೆಗೆದ ಪರಶುರಾಮನೇ ಈ ರೂಪಕದ ಕಥಾನಾಯಕನು. ಪ್ರಜಾಪೀಡಕನಾದ ಕಾರ್ತವೀರ್ಯಾರ್ಜುನನು ಪರಶುರಾಮನ ಕ್ರೋಧಕ್ಕೆ ತುತ್ತಾಗಿ ಅವನ ಗಂಡುಗೊಡಲಿಗೆ ಬಲಿಯಾದುದೇ ಈ ರೂಪಕದ ಕಥಾವಸ್ತು.

ಕಾರ್ತವೀರ್ಯನ ದಬ್ಬಾಳಿಕೆಯ ಬಾಳ್ಮೊನೆಗೆ ಪ್ರಜೆಯೆಲ್ಲ ತುತ್ತಾಗುವುದು; ಅವನ ಶಶ್ವತ್ಸ್ವತಂತ್ರದ ನಾಡು ಪ್ರಜಾದಾಸ್ಯದ ಬೀಡಾಗುವುದು. ಕಲ್ಲು ಕಣ್ಣೀರಿಡುವ ಆ ನಾಡ ಸಂಕಟ ಕಂಡು ಗಂಡುಗೊಡಲಿಯ ಗಂಡನ ಮನರೋಸಿ, ಮನಹೇಸಿ, ಸೈರಣೆಯು ಸವೆಯುವುದು; ಕಾರ್ತವೀರ್ಯನ ಹುಟ್ಟೊರಸಲಿಕೆ ಅವನ ರಕುತ ಕುದಿಯುವುದು.

ಮಾನವ ಪ್ರಾಣವ ಕಾಪಿಡಲಾವು
ನಾಡಿನ ಪೀಡೆಯ ದೂಡಲಿಕಾವು
ಕ್ರಾಂತಿಯ ತರಬೇಕಿಲ್ಲವೆ ಸಾವು!

ಎಂಬುದೇ ಅವನ ಪಲ್ಲವಿಯಾಗುವುದು. ಅಂದಿನಿಂದವನು ಕ್ರಾಂತಿನಾಥನು—

ಮಸೆಯಲಿ ಕ್ರಾಂತಿಯ ಕ್ರೂರ ಕುಠಾರಂ!
ನೆಲಸಮವಾಗಲಿ ವೈರಿ ಪಠಾರಂ!

ಎಂಬ ವೀರೋದ್ಗಾರಗಳಿಂದ ತೆರೆಯೇಳುವುದು. ಭೀಷಣ ಮನೋಹರವಾದ ಈ ದೃಶ್ಯಕ್ಕೆ ಸಮಾನವಾದ ಬೇರೊಂದು ದೃಶ್ಯವು ಕನ್ನಡ ಸಾಹಿತ್ಯದಲ್ಲಿ ಅಪೂರ್ವ. ಈ ರೂಪಕದ ಪ್ರತ್ಯಕ್ಷರವೂ ವೀರರಸದಿಂದುಕ್ಕಿ ಹರಿಯುವುದು.

ಅಭಿಪ್ರಾಯಗಳು—

ಈ ರೂಪಕದ ಪ್ರತಿ ದೃಶ್ಯದಲ್ಲಿ, ಪ್ರತಿ ವಾಕ್ಯದಲ್ಲಿ ಎಂಥ ಬಲುಮೆಯಿದೆ! ಹೊಸ ಭಾವಗಳನ್ನು ತಂದಿರುವಲ್ಲಿ ಎಷ್ಟು ಹೊಂದಿಕೆ, ಹುರುಡು ಎದ್ದು ಕಾಣುತ್ತಿದೆ! ನಿಜವಾಗಿ ರಾಜರತ್ನರ ರೌದ್ರ ಪ್ರತಿಭೆಯು ಇಲ್ಲಿ, ಈ ಏಕಾಂಕ ದೃಶ್ಯದ ಗಂಡುಗೊಡಲಿಯ ಕೆನ್ನೀರು ಹನಿಗಳ ಕೆಂಪಿನಲ್ಲಿ ಬೆರಗುಗೊಳಿಸುವಂತಹ ಕೆಲಸ ಮಾಡಿದೆ. ಇದಕ್ಕೆ ಯಾವ ಸಂಶಯವೂ ಇಲ್ಲ. —"ಜಯ ಕರ್ಣಾಟಕ."

ಭಾಷೆ ವೀರ್ಯವತ್ತಾಗಿ, ಅರ್ಥಪೂರ್ಣವಾಗಿ, ಕಿವಿಗೆ ಹಿತವಾಗಿ, ವಿಷಯ ಗೌರವಕ್ಕೆ ತಕ್ಕಂತೆ ಪ್ರೌಢವಾಗಿ, ಆದರೂ ಎಲ್ಲರಿಗೂ ಅರ್ಥವಾಗುವಂತೆ ಸುಲಭವಾಗಿದೆ. ಛಂದಸ್ಸಿನ ಓಟ ನಿರರ್ಗಳವಾಗಿದೆ. ಮಾತುಗಳು ಕೊಡಲಿಯ ಪೆಟ್ಟಿನಿಂದ ಹೊರಡುವ ಕಿಡಿಗಳಂತೆ ಫುಟ ನೆಗೆಯುತ್ತವೆ. . . . . ಒಟ್ಟಿನಲ್ಲಿ ರೂಪಕವು ಉತ್ತಮವಾಗಿದೆ.

—"ಪ್ರಬುದ್ಧ ಕರ್ಣಾಟಕ."

---

**ರಕ್ತಾಕ್ಷಿ** (ಕವಿಗಳ ಭಾವಚಿತ್ರ ಸಹಿತ)

—ಕೆ. ವಿ. ಪುಟ್ಟಪ್ಪ, ಎಂ.ಎ. ಕ್ರೌನ್ ಅ. ೧೮+೨+೧೫೮ .. ೧—೮—೦

ಕ್ಯಾಲಿಕೊ ಪ್ರತಿ .. ೨—೦—೦

ಮಲೆನಾಡಿನಲ್ಲಿ ಪೂರ್ವದಲ್ಲಿ ಹೆಸರಾಂತ ರಾಜ್ಯಗಳಲ್ಲಿ ನಗರ ಸಂಸ್ಥಾನವು ಪ್ರಮುಖವಾದುದು. ವೈಭವದಿಂದ ಮೆರೆದ ಆ ರಾಜ್ಯದ ಅವಸಾನಕಾಲದ ಚರಿತ್ರೆಯೇ ಈ ನಾಟಕದ ಕಥಾವಸ್ತು. ಇಂದಿನ ಚರಿತ್ರೆಯ ಪುಸ್ತಕಗಳಲ್ಲಿ ನಿರ್ಜೀವರಾಗಿ, ಕೇವಲ ಹೆಸರುಗಳಾಗಿ ತೋರುವ ಬಸವನಾಯಕ, ಚೆಲುವಾಂಬೆ, ನಿಂಬಯ್ಯ, ಲಿಂಗಣ್ಣ ಮಂತ್ರಿ, ಹೈದರಾಲಿ ಮೊದಲಾದ ಪುರಾತನ ವ್ಯಕ್ತಿಗಳಿಲ್ಲಿ—ಶ್ರೀಮಾನ್ ಪುಟ್ಟಪ್ಪನವರ ಕಾವ್ಯರಂಗದಲ್ಲಿ—ನೂತನ ಜೀವವನ್ನು ಹೊಂದಿ, ಚರಿತ್ರೆಯಲ್ಲಿ ಕಾಣದಿದ್ದರೂ ಕವಿನಿರ್ಮಿತರಾಗಿ ಸಜೀವರಾಗಿರುವ ಇತರ ವ್ಯಕ್ತಿಗಳೊಡನೆ ವ್ಯವಹರಿಸಿ ; ಸುಮಾರು ಇನ್ನೂರು ವರುಷಗಳ ಹಿಂದೆ ಅರಮನೆಯ ಪಿತೂರಿ, ಕುಯುಕ್ತಿ, ದ್ರೋಹ, ದ್ವೇಷಾಸೂಯೆಗಳು, ವಿಷಯಾಭಿಲಾಷೆ, ಹೇಡಿತನಗಳು—ಇವುಗಳಿಗೆ ತುತ್ತಾಗಿ, ಶತ್ರುವಿನ ಪಾಲಾದ ನಗರದ ರುದ್ರನಾಶವನ್ನಿಲ್ಲಿ ಬಹು ಹೃದಯಂಗಮವಾಗಿ, ರಸಭರಿತವಾಗಿ ಅಭಿನಯಿಸುವರು. ಕನ್ನಡ ಸಾಹಿತ್ಯದಲ್ಲಿ ಉತ್ತಮವಾದ ಪ್ರತಿಭಾ ಸಂಪನ್ನವಾದ ಮಹತ್ವಾದ ಇಂತಹ ಐತಿಹಾಸಿಕ ನಾಟಕವು ಬೇರೊಂದು ದೊರೆಯುವುದು ದುರ್ಲಭವು. ಸರಳ ರಗಳೆಯೂ ಮೃದು ಗದ್ಯವೂ ಬಹುಮನೋಜ್ಞವಾಗಿ ಬೆರೆತು ಈ ನಾಟಕವನ್ನು ಅಪೂರ್ವ ಶೋಭಾಮಯವಾಗಿ ಮಾಡಿರುತ್ತವೆ.

ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರಿ, ಎಂ.ಎ. ಯವರು ಈ ಗ್ರಂಥದ ವಿಷಯದಲ್ಲಿ ಮುನ್ನುಡಿಯಲ್ಲಿ ಹೀಗೆಂದು ಹೇಳಿರುವರು—

ಇದು ಕನ್ನಡಕ್ಕೆ "ಹ್ಯಾಂಲೆಟ್" ಕಾವ್ಯ. ಇಂಗ್ಲಿಷಿನಲ್ಲಿ "ಹ್ಯಾಂಲೆಟ್" ಹುಟ್ಟಿದಾಗ ಅದರ ಸಾಹಿತ್ಯವು ಅತ್ಯುನ್ನತ ಶಿಖರವನ್ನೇರಿತು. "ರಕ್ತಾಕ್ಷಿ" ಯಂಥ ಶ್ಲಾಘ್ಯ ಸ್ವತಂತ್ರ ಐತಿಹಾಸಿಕ ನಾಟಕವು ಆಧುನಿಕ ಕನ್ನಡ ಸಾಹಿತ್ಯದಲ್ಲಿ ಹುಟ್ಟಿದಾಗ ಅದರ ಮಟ್ಟವು ಬಹು ಎತ್ತರಕ್ಕೆ ಏರಿರುವುದೆನ್ನುವುದರಲ್ಲಿ ಸಂದೇಹವಿಲ್ಲ. . . . ಇಂಥ ಒಳ್ಳೆಯ ಕೃತಿಯನ್ನು ಪ್ರಕಟಿಸುವ ಸುಯೋಗ ಲಭಿಸಿದ್ದಕ್ಕಾಗಿ ನಾನು ಶಿವಮೊಗ್ಗೆಯ ಕರ್ಣಾಟಕ ಸಂಘವನ್ನು ಅಭಿನಂದಿಸುತ್ತೇನೆ.

**ಹನಿಗಳು** (ಲಘುಚಿತ್ರಗಳು)

—ಜಿ. ಪಿ. ರಾಜರತ್ನಂ, ಎಂ.ಎ. ಕ್ರೌನ್ ಅ. ೮+೮೬+೪ .. ೦—೧೦—೦

ಕ್ಯಾಲಿಕೊ ಪ್ರತಿ .. ೧— ೪—೦

ಈ ಬಗೆಯ ಪುಸ್ತಕ ಕನ್ನಡಕ್ಕೆ ಹೊಸದು. . . .

ವಿಸ್ತಾರವಾದ ಕಾದಂಬರಿಗಳು ಕುಗ್ಗಿ ಸಣ್ಣ ಕಥೆಗಳಾದವು. ಇಲ್ಲಿ ಆ ಸಣ್ಣ ಕಥೆಗಳೂ ಕುಗ್ಗಿ ಒಂದು ಒಂದೂವರೆ ಪುಟಗಳಿಗೆ ಇಳಿದು ಹನಿಗಳಾಗಿವೆ. . . .

ಈ ಹನಿಗಳಲ್ಲಿ ಕೆಲವು ಕಥೆಗಳು, ಕೆಲವು ವರ್ಣನೆಗಳು, ಕೆಲವು ಮನಸ್ಸಿನ ಯೋಚನೆಯ ತೆರೆಗಳು, ಮತ್ತೆ ಕೆಲವು ವಿಮರ್ಶೆಗಳು. ಕಥೆಯಾಗಲಿ, ವರ್ಣನೆಯಾಗಲಿ, ಯೋಚನೆಯಾಗಲಿ, ವಿಮರ್ಶೆಯಾಗಲಿ—ಎಲ್ಲದರಲ್ಲಿಯೂ ನಾವು ತಿಳಿದುಕೊಳ್ಳಬಹುದಾದ, ತಿಳಿದುಕೊಳ್ಳಬೇಕಾದ

ಒಂದು ತಿರುಳು ಅಡಗಿಕೊಂಡೇ ಇರುತ್ತದೆ. ಇದನ್ನು ಓದಿ ತಿಳಿಯುವಾಗ ಮನೋರಂಜನೆಯೂ ಆಗುತ್ತದೆ. —"ಪ್ರಬುದ್ಧ ಕರ್ಣಾಟಕ."

ಹೊಚ್ಚ ಹೊಸ ಪ್ರಕಾರವೊಂದು ಇಲ್ಲಿ ಒಡಮೂಡಿದೆಯೆನ್ನಬಹುದು. ಅದಕ್ಕೆ ಕಿರಿಕಿರಿಯು ಕತೆ ಇಲ್ಲವೆ ಹನಿ ಎಂದೇ ಎನ್ನಬಹುದು....ಕನ್ನಡದ ಕಥಾ ಸಾಹಿತ್ಯವು ಚಂಪೂ ಕಾವ್ಯಗಳಲ್ಲಿ ಮೊದಲು ಸಮುದ್ರವಾಗಿ ತೋರಿ, ಇಂದಿನ ಕಾದಂಬರಿಗಳಲ್ಲಿ ನದಿಯಾಗಿ, ಸಣ್ಣ ಕಥೆಗಳಲ್ಲಿ ಹಳ್ಳವಾಗಿ ಈ ಕೃತಿಯಲ್ಲಿ ಹನಿಯಾಗಿದೆ. ಕಥೆಯು ಆಕಾರವೆಷ್ಟು ಕಿರಿದಾಗಬೇಕೋ ಅದರ ಕೊನೆ ಮುಟ್ಟಿದಂತೆ ಈ ಹನಿಗಳಲ್ಲಿ ಒಂದೊಂದು ಒಂದೆರಡು ಪುಟದ ಸಂಪುಟದಲ್ಲಿ ಮುತ್ತುಗಳಂತೆ ನಿಂತಿವೆ. ನಿತ್ಯಜೀವನದಲ್ಲಿ ಕಲೆಯ ಸಿದ್ಧರೂಪಗಳನ್ನು ಕಂಡು ಎತ್ತಿಡುವದಾಗಲಿ, ಅಸಿದ್ಧವಾದರೂ ಅವುಗಳ ಒಡಲಿಂದ ಸಿದ್ಧವಾದವುಗಳನ್ನು ಮಿಂಚುವೇಗದಿಂದ ನಿರ್ಮಾಣಮಾಡುವದಾಗಲಿ ಕತೆಗಾರಿಕೆಯ ಕುಶಲಕರ್ಮ. ಅದು ರಾಜರತ್ನಂ ಅವರಿಗೆ ಸಹಜವಾಗಿದೆ. —"ಜಯ ಕರ್ಣಾಟಕ."

**ಪಾಂಚಜನ್ಯ** (ಕವನ ಸಂಗ್ರಹ)

—ಕೆ. ಪಿ. ಪುಟ್ಟಪ್ಪ, ಎಂ.ಎ. ಕ್ರೌನ್ ೩. ೮೦ .. ೦—೧೨—೦

ಕ್ಯಾಲಿಕೊ ಪ್ರತಿ .. ೧— ೪—೦

ಈ ಕವನ ಸಂಗ್ರಹವು ಈಗಾಗಲೇ ಪ್ರಸಿದ್ಧವಾಗಿರುವ—ಪಾಂಚಜನ್ಯ—ಕಲ್ಕಿ—ಕುಮಾರವ್ಯಾಸ—ಇಂದಿನ ದೇವರು—ಶ್ರಾವಣ ಸುಧ್ಯಾಸಮೀರಣ, ಈ ಕವನಗಳನ್ನಲ್ಲದೆ—ಕಾಳರಾತ್ರಿ—ವಿಪ್ಲವಮೂರ್ತಿ—ಸತ್ಯಾಗ್ರಹಿ — ಅವತಾರ — ಮಹಾತ್ಮಾ ಗಾಂಧಿ — ಭರತಮಾತೆ — ಭಾರತ ತಪಸ್ವಿನಿ—ಮುಕ್ತಿರಾಹು—ಇವೇ ಮೊದಲಾದ ಕವನಗಳನ್ನೊಳಗೊಂಡಿದೆ. ಈ ಕವನಗಳಲ್ಲಿ ಲಾಲಿತ್ಯಕ್ಕೆ ಬಹ್ವಂಶ ಎಡೆಯಿಲ್ಲವೆಂದು ಹೇಳಬಹುದು. 'ತರುಗಳ ತಳಿರಿನ ತಣ್ಣೆಳಲಲ್ಲಿ' ಕುಳಿತು ಹಾಯಾಗಿ ಹಾಡುವ ಗೊಲ್ಲನ 'ಕೊಳಲಿ'ನ ಇನಿದನಿಯಿಲ್ಲಿ ಕೇಳಿಬರುವುದಿಲ್ಲ. ಇಂಚರದ 'ಕೊಳಲು' ಬಿರಿದಿಲ್ಲಿ ಕಠೋರ ಭೇರಿಯಾಗಿದೆ. ಅದರ ನಾದವು ಬೊಮ್ಮನ ಬಿರಿವಂತೆ ಮಸೆಯುತಿದೆ. ಕವಿಯ ಲೇಖನಿಯಿಲ್ಲಿ ಕಠಾರಿಯಾಗಿದೆ.

ನದಿಗಿರಿ ನಿರ್ಝರ ಜಲಕಲತಾನದಂತೆ ಮಂಜುಳ ನಿನದದಿಂದ ಜಾರುವ ಶ್ರೀಮಾನ್ ಪುಟ್ಟಪ್ಪನವರ ಶಬ್ದಸ್ರೋತವಿಲ್ಲಿ ಕಡಲವಾಣಿಯಂತೆ ಕೂಗಿ ರೇಗಿ ಉನ್ಮತ್ತವಾಗಿ ತೆರೆಯೇಳುತಿದೆ. ಅವರ ಶಬ್ದಶೈಲಿಯಿಲ್ಲಿ 'ಸಿಡಿಲನು ಸಿಡಿಯುತೆ ಮೊಳಗುತೆ ನುಗ್ಗುವ ಕಾರ್ಗಾಲದ ಕರ್ಮುಗಿಲಿಂ ಹೊಮ್ಮುವ ಕೆಂಗಿಡಿ ಬಣ್ಣದ ಹೊಂಗೆರೆ' ಮಿಂಚಿಗೆ ಸಮನಾಗಿ ರುದ್ರವಾಗಿ ಬೆಳಗುತ್ತಿದೆ. ಈ ಕವನಗಳನ್ನು ಓದುತ್ತಿದ್ದಂತೆ 'ಮೆಯ್ಯಲಿ ಮಿಂಚಿನ ಹೊಳೆ ತುಳುಕಾಡುವುದು.'

ಕಲಾವಿದನು ಈ ರುದ್ರಾರಾಧನೆಯ ಕಾರಣವನ್ನು ದೂರ ಅರಸಬೇಕಾದುದಿಲ್ಲ. ಶ್ರೀಮಾನ್ ಪುಟ್ಟಪ್ಪನವರು ಅದನ್ನು ಮುನ್ನುಡಿಯಲ್ಲಿ ಹೀಗೆ ವಿವರಿಸಿರುವರು—"ಸೃಷ್ಟಿಯಲ್ಲಿ ರುದ್ರವೂ ರಮಣೀಯವೂ ಮಿಳಿತವಾಗಿವೆ. ಆದ್ದರಿಂದ ನಿಜವಾದ ಕಲಾವಿದನಿಗೆ ಸೌಂದರ್ಯದಂತೆ ರೌದ್ರವೂ ಆರಾಧನೆಯ ದೇವತೆಯೇ. ಯಾವುದನ್ನು ಬಿಟ್ಟು ಯಾವುದನ್ನು ಹಿಡಿದರೂ ಪೂರ್ಣ ಸತ್ಯವಾಗುವುದಿಲ್ಲ."

---